# MUGULU

*(A BOOK OF POEMS IN KANNADA)*

FOR THE USE OF SCHOOLS

**(Approved by the Text book Committee, Madras)**

**BY**

K. Honnayya Shetty

---

# ಮುಗುಳು

**ಕೆ. ಹೊನ್ನಯ್ಯ ಶೆಟ್ಟಿ.**

**Twelfth Edition**

12ನೇ ಮುದ್ರಣ.

ಪ್ರಕಾಶಕರು:

ನವಭಾರತ ಪುಸ್ತಕ ಭಂಡಾರ, ಉಡುಪಿ.



0—6—0

# ಅರ್ಪಣ



— —

ನನ್ನ

ಪರಮ ಪೂಜ್ಯ ಗುರುಗಳಾದ

**ಶ್ರೀಮಾನ್ ಉಳ್ಳಾಲ ಮಂಗೇಶ ರಾವ್,**

ಬಿ. ಎ., ಎಲ್. ಟಿ. ಅವರ

ಅಡಿದಾವರೆಗಳಲ್ಲಿ.

—

ಕೆ. ಹೊನ್ನಯ್ಯ ಶೆಟ್ಟಿ.

—

ಮುದ್ರಕರು:
ನವಯುಗ ಪ್ರೆಸ್, ಉಡುಪಿ.

# ಮುನ್ನುಡಿ

**ಮುಗುಳಿದು** ಮುಗುಳಲ್ಲ; ಮುಗುಳುಗಳ ಮಾಲೆ, ಅರೆ ಮುಗುಳುಗಳ ಮಾಲೆಯೆಂದರೂ ಸಲುವುದು. ಎಳೆಯ ಕನ್ನಡ ಗಬ್ಬಿಗನಿಂದ ಆಯಲ್ಪಟ್ಟು ಅವನುಡಿಯಲ್ಲಿಯೇ ಪವಣಿಸಿ ಬಂದ ಈ ಅರೆಬಿರಿದ ಮುಗುಳುಗಳ ಮಾಲೆಯೇ ಕನ್ನಡಿಗರೆಲ್ಲರಿಗೂ ಕಂಠಾಭರಣವಾಗಿ ಪರಿಣಮಿಸಲೆಂಬುದಿದೀಗ ನನ್ನ ಮುನ್ನುಡಿ.

ಎಳೆಯ ಕಬ್ಬಿಗನ ಮೊದಲ ಕಜ್ಜವಿದು. ಅವಿಕಲವೆಂದು ಹೇಳುವುದಕ್ಕಿಲ್ಲ; ಪರಿಪಕ್ವವೆಂದು ತಿಳಿಯುವುದಕ್ಕೂ ಇಲ್ಲ. ಮುಗುಳಿದು ಅರೆಮುಗುಳು, ಬಿರಿದ ಹೂವಲ್ಲ. ಆದುದರಿಂದ ಅಷ್ಟೊಂದು ಪರಿಮಳದ ಬಹಿಃಪ್ರಸಾರವಿರದು; ಆದರೂ ಕೇವಲ ಕೋಮಲವಾದ ಅದರ ಸುವಾಸನೆಯ ಸೌಮ್ಯತೆ ಸೂಕ್ಷ್ಮವಾಗಿ ಹೊರಸೂಸದೆ ಇಲ್ಲವೆಂದರೆ ಅಡ್ಡಿಯಿರದು.

ಎಳೆಗಬ್ಬಿಗನ ಮೊದಲ ಕಜ್ಜವಾದರೂ ಕಜ್ಜಾಯದಂತೆ ಗ್ರಹಣ ಯೋಗ್ಯವೇ. ಲೀಲಾಶುಕನ ಬಾಲಭಾಷಿತದ ಅದೊಂದು ಬಗೆಯ ಮಾಧುರ್ಯವನ್ನು ಯಾರಿನ್ನು ಗ್ರಹಿಸಲಿಕ್ಕಿಲ್ಲ? ಕ್ಷೀರ ನೀರನ್ಯಾಯವನ್ನು ಅನುಸರಿಸದಿರುವ ಅರಸಂಚೆಗಳಾದರೂ ಯಾರೀ ಪ್ರಪಂಚದಲ್ಲಿ? ಅಲಂಕಾರವಿಲ್ಲದೆ ಹೇಳುವುದಾದರೆ, ಛಂದೋವ್ಯಾಕರಣ ವಿಧಿನಿಷೇಧಗಳ ನಿಯಮೋಲ್ಲಂಘನದಿಂದ ಶುದ್ಧ ಪಂಡಿತರ ಸಮಾದರಕ್ಕೆ ಪಾತ್ರವಾಗಲಾರದೆ ಹೋದರೂ ಪ್ರತಿಪಾದಿತವಾದ ವಿಷಯಗಳ ಮತ್ತು ರಸಭಾವಗಳ ನವೀನ ಸಮ್ಮೇಲನದಿಂದ ನವೀನ ಕವಿಯ ಕೃತಿಯಿದು ಸಾಮಾನ್ಯವಾಗಿ ಎಲ್ಲರ ಮನಸ್ಸನ್ನೂ ರಂಜಿಸದೆ ಇರಲಾರದು. ಮುಖ್ಯವಾಗಿ ಮೂಲಶಾಲೆಗಳ ಎಳೆಮಕ್ಕಳ ಪದ್ಯಪಾಠಕ್ಕೆ ಕೇವಲ ಉಪಯುಕ್ತವಾದ ಈ ಉದ್ಯಮದಿಂದ ಉದ್ದೇಶವು ಸ್ವಲ್ಪವಾದರೂ ಸಿದ್ಧವಾಗುವುದಾದಲ್ಲಿ ನಮ್ಮ ಈ ಎಳೆಗಬ್ಬಿಗನ ಶ್ರಮವು ಸಾರ್ಥಕವಾದಂತಾಗುವುದರಲ್ಲಿ ಸಂದೇಹವಿಲ್ಲ.

"ಶ್ರೀವಿಲಾಸ" ಕಡೇಕಾರು
ಉಡುಪಿ.
16ನೇ ಜುಲೈ, 1929.

**ಎನ್. ರಾಜಗೋಪಾಲಕೃಷ್ಣರಾಯ,**
ಭೂತಪೂರ್ವ 'ಶ್ರೀ ಕೃಷ್ಣಸೂಕ್ತಿ' ಸಂಪಾದಕ
ಮತ್ತು ವೃತ್ತಲೇಖಕ.

# ಅನುಕ್ರಮಣಿಕೆ

# ಮುಗುಳು

## ರವಿಯೆ ಬಾರೊ!



ರವಿಯೆ ಬಾರೊ! ಬುವಿಗೆ ಬಾ!
ನಿನ್ನ ಮೊಗದ ಸಿರಿಯು ತಾ!

ಮೂಡಿ ಬಾರೊ! ಓಡಿ ಬಾರೊ!
ಮೂಡ ಕಾಡ ಏರಿ ಬಾರೊ!
ಮೂಡ ಬೆಟ್ಟ ಹತ್ತಿ ಬಾರೊ!
ನಾಡಿಗಂದವೀಯೆ ಬಾರೊ!

ರವಿಯೆ ಬಾರೊ! ಬುವಿಗೆ ಬಾ!

ಬೆಳಕ ತಾರೊ! ಬೆಳಗಿ ಬಾರೊ!
ಇಳೆಯ ಕಣ್ಣೆ! ಬೇಗ ಬಾರೊ!
ಕತ್ತಲನ್ನು ಕಳೆಯೆ ಬಾರೊ!
ಸುತ್ತಮುತ್ತ ಬೆಳಗೆ ಬಾರೊ!

ರವಿಯೆ ಬಾರೊ! ಬುವಿಗೆ ಬಾ!
ಮುಗುಳು ಕಮಲ ಬಿರಿಯೆ ಬಾರೊ!
ಜಗದ ಎವೆಯ ತೆರೆಯೆ ಬಾರೊ!
ಹೊಳೆದು ಬಾರೊ! ಇಳಿದು ಬಾರೊ!
ಒಲಿದು ಬಾರೊ! ನಲಿದು ಬಾರೋ!
ರವಿಯೆ ಬಾರೊ! ಬುವಿಗೆ ಬಾ!



## ಪಕ್ಕಗಳಿದ್ದರೆ

ಹಕ್ಕಿಯ ತೆರದಲಿ ಪಕ್ಕಗಳಿದ್ದರೆ—
ಗಕ್ಕನೆ ಗಗನಕೆ ಹಾರುತಲಿರ್ದೆ.
ಏರಿಗೆ ಹಾರುತ-ಬಾನನು ಸೇರಿ,
ತೋರುತ ಲೀಲೆಯ ನಾ ಬರುತಿರ್ದೆ.

ಹಕ್ಕಿಯ ತೆರದಲಿ ಪಕ್ಕಗಳಿದ್ದರೆ—
ಮೂಡಣ ಬೆಟ್ಟವ ಗಟ್ಟವ ಸಾಗಿ,
ಮೂಡುವ ರವಿಯನು ನಾ ತರುತಿರ್ದೆ,
ಓಡುವ ಗಾಳಿಯ ಹಿಡಿಯುತಲಿರ್ದೆ.

ಹಕ್ಕಿಯ ತೆರದಲಿ ಪಕ್ಕಗಳಿದ್ದರೆ—
ಚೆಲುವಿನ ಚಂದ್ರನ, ಮೇಲಿನ ಇಂದ್ರನ,
ತಳಮಳ ಮಿನುಗುವ ಹೊಳಹೊಳ ಹೊಳೆಯುವ
ತಾರೆಗಳೆಲ್ಲವ ನಾ ತರುತಿರ್ದೆ.



## ವಾರ—ಬಣ್ಣ

ವಾರದ ದಿನಗಳ ಹೆಸರನು ಕೇಳಿ

ಬಣ್ಣದ ಉಡುಗೆಯು ಉಡುವಾ ಏಳಿ

ಆದಿತ್ಯವಾರಕೆ ಕೆಂಪು ಅಂಗಿ

ಸೋಮವಾರಕೆ ಹಳದಿ ಲುಂಗಿ

ನೀಲಿಯ ಚಡ್ಡಿ ಮಂಗಳವಾರ

ಹಸುರು ಉಡುಗೆಯು ಬುಧವಾರ

ನೇರಳೆ ತೊಡುಗೆಯು ಗುರುವಾರ

ಶುಕ್ರವಾರಕೆ ಕಿತ್ತಳೆ ಶರಟು

ಶನಿವಾರಕೆ ಬಿಳಿ ಶುಚಿ ಕೋಟು

ವಾರದ ಹೆಸರನು ಮರೆಯದಿರಿ

ಶುಚಿಯಾದುಡುಗೆಯು ಹಾಕುತಿರಿ.



## ಹಾರುವ ಹಕ್ಕಿ

ಸೊಬಗಿನ ಹಕ್ಕಿಯೆ! ಸೊಗಸಿನ ಚುಕ್ಕಿಯೆ!
ಹಾರುವ ಹಕ್ಕಿಯೆ। ಬಾರೆಲೆ ಹಕ್ಕಿಯೆ!
ಪುಕ್ಕದ ಹಕ್ಕಿಯೆ! ಬಣ್ಣದ ಹಕ್ಕಿಯೆ!
ಆಡಲು ಬಾರೈ! ಹಾಡಲು ಬಾರೈ!
ಚಿಂ ಚೀ ಚಿಂ ಚೀ ಚಿಂ ಚೀ ಚಿಂ ಚೀ.

ಸೊಬಗಿನ ಹಕ್ಕಿಯೆ! ಸೊಗಸಿನ ಚುಕ್ಕಿಯೆ!
ಆಡುವರಿಲ್ಲವು, ಹಾಡುವರಿಲ್ಲವು
ಆಡುವ ಬಾರೈ! ಹಾಡುವ ಬಾರೈ!
ಆಡುತ ಹಾಡುತ ನಲಿಯುವ ಬಾರೈ!
ತೈ ತಕ ತೈ ತಕ ತೈ ತಕ ತೈ ತಕ.

ಸೊಬಗಿನ ಹಕ್ಕಿಯೆ! ಸೊಗಸಿನ ಚುಕ್ಕಿಯೆ!
ಅಮ್ಮನು ಕೊಟ್ಟಿಹ ಚಕ್ಕುಲಿ ಉಂಟು,
ಅಕ್ಕನು ಕೊಟ್ಟಿಹ ಸಕ್ಕರೆ ಉಂಟು;
ಇಬ್ಬರು ಸೇರುತ ಸವಿಯುವ ಬಾರೈ!
ಚಕ್ಕುಲಿ ಕುಟು ಕುಟು ಸಕ್ಕರೆ ಸವಿ ಸವಿ.

ಸೊಬಗಿನ ಹಕ್ಕಿಯೆ! ಸೊಗಸಿನ ಚುಕ್ಕಿಯೆ!
ಮೇಲಕೆ ಹಾರಲು ಕಲಿಸೆಯ ನನಗೆ?
ಹಾಲನು ಕೊಡುವೆನು ಈಗಲೆ ನಿನಗೆ,
ಹಾರುವ ಹಕ್ಕಿಯೆ! ಬಾರೆಲೆ ಹಕ್ಕಿಯೆ!
ಹಾ ಬಾ ಹಾ ಬಾ ಹಾ ಬಾ ಹಾ ಬಾ.

## ಹಸಿದವರಿಗೆ ಇಲ್ಲ



ವರುಷ ಒಂದು ಸಂದಿತು
ಹೊಸತು ಹಬ್ಬ ಬಂದಿತು
ತಿನಲು ಉಣಲು ಸಿಕ್ಕಿತು
ಕುಣಿಯಲೆಮಗೆ ಆಯಿತು.

ಕುರುಡಿ ಸುಬ್ಬಿ ಬಂದಳು
ಬೇಡಿ ಕಾಡಿ ನಿಂದಳು
ಅಮ್ಮ—"ಹೋಗು" ಎಂದಳು;
"ಏನು ಇಲ್ಲ"—ಅಂದಳು.

ಕುರುಡಿ ಸುಬ್ಬಿ ನಡೆಯುತ
ಹೋದಳಾಗ ಮರುಗುತ
ನೆರೆಯ ಪುಟ್ಟ ನೋಡುತ
ಮನೆಗೆ ಬಂದನಾಡುತ.

ಅಮ್ಮ ಕರೆದಳವನನು
ಕೊಟ್ಟಳವಗೆ ತಿನಿಸನು
ಹಸಿದ ಜನಕೆ ಇಲ್ಲವೆ?
ಅವರಿಗೇನು ಸಲ್ಲವೆ?

ಹಸಿದ ಜನಕೆ ಉಣಿಸುವ!
ಅವರ ಹೊಟ್ಟೆ ತಣಿಸುವ!
ಹಸಿದ ಜನಕೆ ತಿನಿಸುವ!
ಅವರನೇಕೆ ದಣಿಸುವ!



## ಬಾರೆ ಹೋಗುವ ಸಾಗುವ

ನಮ್ಮ ಊರಿನ ಜಾತ್ರೆ ಈ ದಿನ
ಬಾರೆ ಹೋಗುವ ಸಾಗುವ!
ಅಮ್ಮ ಬರುವಳು ಅಕ್ಕ ಬರುವಳು,
ಬಾರೆ ಹೋಗುವ ಸಾಗುವ!

ಅಪ್ಪ ಬರುವನು ಅಣ್ಣ ಬರುವನು,
ಬಾರೆ ಹೋಗುವ ಸಾಗುವ!
ತಮ್ಮ ಬರುವನು, ತಂಗಿ ಬರುವಳು,
ಬಾರೆ ಹೋಗುವ ಸಾಗುವ!

ಮಾವ ಬರುವನು ಬಾವ ಬರುವನು,
ಬಾರೆ ಹೋಗುವ ಸಾಗುವ!
ದುಡ್ಡು ಕೊಡುವರು ಲಡ್ಡು ಕೊಡುವರು,
ಬಾರೆ ಹೋಗುವ ಸಾಗುವ



## ಬೆಕ್ಕು



ಬೆಕ್ಕೀ! ಬೆಕ್ಕೀ!
ಏನೇನ್ ಬೆಳೀತಿ?
ಉಕ್ಕೀ ಹೆಕ್ಕೀ
ಏನೇನ್ ನೆಡುತಿ?
ಇಲೀಗೆಲ್ಲ ಗೋಧಿಕಾಳು,
ಸೂರ್ಯನ ಕುದುರೆಗೆ
ಹುಲ್ಲಿನ ಚಿಗುರು,
ಹಕ್ಕೀ ಪಕ್ಕೀ ತಿನಲಿಕ್ಕಕ್ಕಿ,
ಬಣ್ಣದ ಚಿಟ್ಟೆಗೆ
ಹುಚ್ಚೆಳ್ಳೊವು.
ಅಕ್ಕಪ್ಪಾ!
ಬೆಕ್ಕಪ್ಪಾ!
ನಿಂಗೇನ್ ಲಾಭ?
ನಮ್ಮವ್ವಾ!
ಮಾತಾಡಲಿಲ್ಲ ಬೆಕ್ಕು!
ಹಾಗೇ ನೋಡಿತು
ಅರಳಿಸಿತು ಕಣ್ಣ
ಕೊಂಕಿಸಿತು ಉಗುರ
ಮೀಸೆ ನೆಕ್ಕೊಂಡಿತು
ಬಾಲ ಹಾ ಮಡಿಸಿತು
ಹಾಗೇ ಕೂತಿತು
ನಿಟ್ಟುಸಿರು ಬಿಡುತ
ಹೇಳಿತು —
“ಏನೋ ಪರಸೇವೆ!
ಬೆಳೀಲಿ ಇವೆಲ್ಲ
ಬರಲಿ ಅವೆಲ್ಲ”

— ಹೊಯ್ಸಳ

# ಕರುವಿನ ಮೊರೆ



ಹುಟ್ಟಿ ಬಂದೆನು ಪೆಟ್ಟು ತಿಂದೆನು,
ಕೆಟ್ಟ ಜನರಲಿ ನೊಂದೆನು.
ಬಟ್ಟೆಯರಿಯೆನು, ಕಟ್ಟಿಕೊರಳನು,
ಕೊಟ್ಟರೆನಗೈ ಸೆರೆಯನು.

ಸಾರಿ ಮೊಲೆಯನು, ಹೀರೆ ಹಾಲನು
ಹಾರಿ ಕೊಟ್ಟರು ತಡೆಯನು
ದೂರ ಪೊಯ್ದರು, ಸಾರಿ ಬೈದರು;
ಸೇರಲೀಯರು ತಾಯನು.

ಹೊಡೆದರೆನ್ನನು, ಬಡಿದು ಬೆನ್ನನು
ಕಡೆಗೆ ಕಂಬಕೆ ಬಿಗಿದರು.
ತಡೆಯಲಾರದೆ, ನಡೆಯಲಾರದೆ,
ಒಡನೆ ಕರೆದೆನು ತಾಯನು.

ಆಗ ಬಂದಳು, ಸಾಗಿ ತಂದಳು
ನಾಗು ತಂಬಿಗೆಯೊಂದನು
ಬೇಗ ಬಿಟ್ಟಳು, ಹೋಗಗೊಟ್ಟಳು,
ಹೇಗೆ ಹುಟ್ಟಿತೊ ಕರುಣೆಯು!

ಹರುಷಗೊಂಡೆನು, ಸರಿದು ಕಂಡೆನು
ಕರೆವ ತಾಯಿಯ ಮುಖವನು
ಸುರಿಯುಬಿಟ್ಟಳು, ಹರುಷಪಟ್ಟಳು,
ತ್ವರದೆ ಕೊಟ್ಟಳು ಹಾಲನು.

ಅಕ್ಕರಿಂದಲಿ ಚೊಕ್ಕದಿಂದಲಿ,
ನೆಕ್ಕುತಿದ್ದಳು ಬೆನ್ನನು
ರಕ್ಕಸಿಯ ತೆರ ನಾಗು ಹೊಕ್ಕಳು
ಸೊಕ್ಕಿ ಬಿಗಿದಳು ನನ್ನನು.

ನೋಡಲಾರದೆ, ಬೇಡಲಾರದೆ,
ಕಾಡಲಾರದೆ ತಾಯಿಯು
ಗಾಢ ಗತಿಯಲಿ, ಮೂಢ ಮತಿಯಲಿ
ಆಡಿಸಲು ಹಿಂಗಾಲನು

ಶಿರಕೆ ತಾಗಿತು, ಗರುವವೇರಿತು,
ಕರದ ಪಾತ್ರವು ಬಿದ್ದಿತು.
ಕೊರಡ ಹಿಡಿದಳು, ಭರದಿ ಬಡಿದಳು,
ಕರುಣೆಯುಡಗಿತು ತಗ್ಗಿತು.

ಕುಡಿಯಗೊಡರೈ, ನಡೆಯಗೊಡರೈ,
ಪಡೆಯಬಿಡರೈ ಹಾಲನು.
ಹಿಡಿದು ಕಟ್ಟುತ, ಹೊಡೆದು ಮೆಟ್ಟುತ,
ಬಿಡದೆ ಜನರೇ ಕುಡಿವರು.

ಯಾವ ನೀತಿಯೊ? ಯಾವ ರೀತಿಯೊ?
ಯಾವ ನ್ಯಾಯವೊ ದೇವನೆ!
ಮೇವು ಇಲ್ಲವು, ಕಾವರಿಲ್ಲವು,
ಕಾಯೊ ನೀ ಕರುಣಾಳುವೆ!

---

## ವಿನಯವೇ ಜಯವು

ಉಕ್ಕಿನಾ ಸರಳೊಂದು ಬಲಶಾಲಿಯೆಂದು
ಸೊಕ್ಕಿ ಮಾತಾಡುವುದ ಖಂಡಿಸುವೆನೆಂದು
ಉಕ್ಕಿನಾ ಮೊನೆಯಾದ ಕೊಡಲಿ ತಾನೊಂದು
ಲೆಕ್ಕಿಸದೆ ಕಡಿಯತೊಡಗಿತು ಬಳಿಗೆ ಬಂದು.

ಕಡಿಕಡಿದು ಕೊಡಲಿ ತಾನತಿ ಬಳಲಿ ನೊಂದು,
ಕಡೆಗೆ ಕಿಡಿಕಿಡಿಯಾಗಿ ಕಡಿಯೆ, ಹಾಯೆಂದು
ಪುಡಿಪುಡಿಯದಾಯಿತ್ತೈ ಬಲು ಕೂಗುತಂದು
ನಡುಗಿತ್ತೈ ಗಡಗಡನೆ ಗತಿಯೇನು ಎಂದು

ಬಂದೊಂದು ಗರಗಸವು ತಾ ನೋಳ್ಪೆನೆಂದು
ಚಂದದಿಂ ಹಲುಗಿರಿದು ಸನಿಹಕ್ಕೆ ಬಂದು
ಮುಂದನರಿಯದೆ ಸರಳ ಸಿಗಿಯಲ್ಕೆ ನಿಂದು
ಮುಂದುಳಿಯದಂತಾದುವೈ ಪಲ್ಗಳೆಂದು

ಸಾಗಬಡಿಯುವೆನೆಂದು ಸುತ್ತಿಗೆಯದೊಂದು
ಪೋಗಿರೆಂದೆಲ್ಲರನು ಕಳುಹಿ ತಾ ನಿಂದು
ಬಾಗಿ ಹೊಡೆಯಲು ಅದರ ಶಿರ ಹಾರಿತಂದು,
ಆಗ ಚೀರಿತು ದಣಿದು ಬಿಟ್ಟೋಡಿ ಬಂದು.

ಬಳಿಕೊಂದು ಪುಟ್ಟ ದೀಪವು ಜಯಿಸಲೆಂದು
ಬಳಿಸಾಗಿ ಶಿರಬಾಗಿ ವಿನಯದಲಿ ನಿಂದು
ಒಲಿದು ಸವಿನುಡಿಯಾಡಿ ನಿಮಿಷದಲಿ ಮುಂದು,
ಬಲವಾಗಿ ಉರಿದು ಸರಳನು ಗೆದ್ದಿತಂದು.

ವಿನಯವೇ ಕೆಲಸ ಕೊನೆಗೊಳಿಪ ಸಾಧನವು;
ವಿನಯವೇ ವಿದ್ಯೆಯು; ವಿನಯವೇ ಧನವು
ವಿನಯದಲಿ ಲೋಕವನು ಜಯಿಸಬಹುದೆಂದ
ವಿನಯವೆಂಬುದೆ ಚಂದವದ ಕಲಿಯೊ ಕಂದ!

---

## ರಂಗನೂ ಪತಂಗವೂ



ರಂಗ

ಬಾರೆಲೆ! ಬಾರೆಲೆ! ಸುಪತಂಗ!
ಹಾರುತ ದಣಿಯುದೆ ನಿನ್ನಂಗ!

ತಾರೆಯು ತೆರದಲಿ ಬಾನಿನಲಿ
ತೋರುವೆ ಮಿನುಗುತ ದೂರದಲಿ
ಹಿತ್ತಲಿಗೇತಕೆ ಹಾರುವೆಯೊ?
ಹತ್ತಿರ ಬಾರದೆ ತೊರೆಯುವೆಯೊ?
ಕತ್ತಿನ ಹಾರವ ನಿನಗೀವೆ;
ಎತ್ತಲು ಆಡುವ ಬಾ, ನಾವೆ.

**ಪತಂಗ**

ಬಾರೆನು ಬಾರೆನು ನಾ ಬಳಿಗೆ,
ಸೇರೆನು ನಿನ್ನನು ಅರೆಗಳಿಗೆ.
ಸಾರುವೆನೆನ್ನಯ ನೆಲೆಮನೆಗೆ,
ಸೇರೆನು ಬಾಲನೆ! ನಾ ನಿನಗೆ.
ಕತ್ತಿನ ಹಾರವೆ ಕತ್ತರಿಯು,
ಕತ್ತನು ಹಿಸುಕುವ ಹತ್ತರಿಯು.
ಎತ್ತಲು ಆಡುವ ನಿನ್ನಾಟ
ಮತ್ತೆನ್ನನು ಕೊಲ್ಲುವ ಮಾಟ.

**ರಂಗ**

ನಿಲ್ಲೆಲೆ! ನಿಲ್ಲೆಲೆ! ನೀನೀಗ,
ಸೊಲ್ಲನು ಹೇಳುವೆ ನಾನೀಗ
ಇಲ್ಲಿಗೆ ಮೆಲ್ಲನೆ ಬಾ ನೀನು
ನಿಲ್ಲದೆ ಬೆಳೆಸುವ ನೇಹವನು
ಕಟ್ಟುವೆ ನಿನ್ನನು ನೂಲಿನಲಿ
ಹೊಟ್ಟೆಯ ತಣಿಪೆನು ಹಾಲಿನಲಿ
ಪಟ್ಟೆಯ ಬಟ್ಟೆಯನುಡಿಸುತಲಿ,
ನೆಟ್ಟನೆ ಹಾರಿಪೆ ಗಗನದಲಿ.

**ಪತಂಗ**

ನಿನ್ನಯ ಸುಖಗಳ ನಾನೊಲ್ಲೆ;
ನಿನ್ನಯ ಸಸಿಹಕೆ ಬರಲೊಲ್ಲೆ.

ಮನ್ನಿಸಬೇಕೈ ಸರ್ವರನು;
ಬನ್ನಂಬಡಿಪುದು ಸರಿಯೇನು?
ಹೂವಿಂ ಹೂವಿಗೆ ಹಾರುತಲಿ
ಸೇವಿಪೆ ಮಧುವನು ಹೀರುತಲಿ.
ದೇವನ ಸ್ಮರಣೆಯು ಮಾಡುತ್ತ.
ಕಾವನ ಹಾಡನು ಹಾಡುತ್ತ
ಗುರುಗಳ ವಚನವ ಕೇಳುತ್ತ.
ಸರಿ ಪಾಠವ ನೀ ಕಲಿಯುತ್ತ
ಪರಮೇಶನ ನೆರೆ ನೆನೆಯುತ್ತ
ಇರೆ ನೀ ಬಾಳುವೆ ಸುಖಿಸುತ್ತ.

ರಂಗ

ಮುದ್ದು ಪತಂಗವೆ! ನಿನ್ನಿಂದ
ಬುದ್ಧಿಯು ಕಲಿತೆನು ನಾನಿಂದ.
ಮುದ್ದಿಸ ಗಿಣಿಯೇ ವಂದನೆಯು;
ಮುದ್ದಿಪ ಗುರುವಿಗು" ವಂದನೆಯು.

---

## ಸೆರೆಯಾಳು

ಮಾನ ಹೋಯಿತು, ಹಾನಿಯಾಯಿತು.
  ಹೀನ ಬಾಳ್ವೆಯು ಒದಗಿತು.
ಸ್ಥಾನ ಹೋಯಿತು, ಊನವಾಯಿತು;
  ಶ್ವಾನಜನುಮವು ಬಂದಿತು.
ಕರುಣೆ ತೋರರು ಮೊರೆಯ ಕೇಳರು.
  ಅರಸನಾಳ್ಗಳು ಕ್ರೂರರು
ಕರೆಸಿ ಎನ್ನನು ಇರಿಸಿ ಬಂಧನ,
  ತೊರೆದು ಪೋದರು ಜಾಣರು.
ತಡೆಯಲಾರದೆ ಮಡದಿ ಮಕ್ಕಳು
  ಬಿಡದೆ ಗೈಯುವ ಗೋಳನು

ಕಡವ ಮಾಡಿದೆ; ಕಡೆಗೆ ಸಾಲವು
 ಒಡನೆ ಏರಿತು; ಹೆಚ್ಚಿತು.
ಹುಟ್ಟ ಕಡವದು ಸೃಷ್ಟಿಯೊಳು ಬಲು
 ಕೆಟ್ಟ ಬಡವನು ಕೆಟ್ಟನು.
ದುಷ್ಟನಾದೆನು; ಭ್ರಷ್ಟನಾದೆನು;
 ಕಷ್ಟಪಡುವೆನು ಲೋಕದಿ.
ಮೂಲವಿಲ್ಲವು ಸಾಲ ಸಲಿಸಲು;
 ಕಾಲು ಕಡಿದಂತಾಯಿತು.
ಪಾಲುಮಾರಿಕೆ ಮಾಡಲಿಲ್ಲವು;
 ಸಾಲವೆನ್ನನು ಕೆಡಿಸಿತು.
ಎಲ್ಲಿ ಮಿತ್ರರು? ಎಲ್ಲಿ ಪುತ್ರರು?
 ಎಲ್ಲರಿದ್ದರು ಹಿಂದಕೆ!
ಸೊಲ್ಲನಾಡರು, ಮೊಗವ ನೋಡರು,
 ಇಲ್ಲವಾದರೆ ಭಾಗ್ಯವು!
ಅಣ್ಣ ಬಾರನು! ತಮ್ಮ ತೋರನು!
 ಕಣ್ಣ ನೀರನು ಮಿಡಿವೆನು.
ಬನ್ನಬಡುವೆನು, ಸುಣ್ಣವಾದೆನು;
 ಪುಣ್ಯವಿಲ್ಲದೆ ಬೆಳೆದೆನು.
ತಾನೆ ಶತ್ರುವು, ತಾನೆ ಮಿತ್ರನು,
 ಏನಿದೇನೈ ಚಿತ್ರವು!
ಹೀನ ಕರ್ಮದಿ ನಾನು ಕೊರಗುವೆ,
 ಏನು ದೈವದ ಮಾಯೆಯು!
ಊರ ಸಾರುತ, ಮನೆಯ ಸೇರುತ,
 ತೋರಲೆಂತೀ ಮುಖವನು?
ಪಾರುಗೊಳಿಸೆಲೆ! ಸಿರಿಯ ರಮಣನೆ!
 ಸಾರಿಬೇಡುವೆ, ಬಾಗುವೆ.

---

## ಅಳಿಯ ಕಟ್ಟು

ತುಳುವ ರಾಜ್ಯದ ಬಾರಕೂರಿನ ಹಳೆಯ ವೈಭವ ಕಾಲದಿ
ಹೊಳೆಯುತಿದ್ದನು ದೇವಪಾಂಡ್ಯನು ಕಳೆದು ಕಾಲವ ತೋಷದಿ.

ದೇವಪಾಂಡ್ಯನು ಬಾರಕೂರಿನ ಸಾಹುಕಾರನು, ಧನಿಕನು;
ಕಾವ ರಾಜನ ತೆರದಿ ಮೆರೆದನು, ಸಾಹುಕಾರನು ಜೈನನು.

ಹಡಗವೊಂದನು ಮಾಡಲೋಸುಗ ಬಡಗಿಯರನವ ಕರೆಸಿದ.
ಅಡವಿಗವರನು ಒಡನೆ ಕಳುಹಿದ, ಕಡಿಯೆ ಮರಗಳ ಯೋಗ್ಯದ.

ಒಂದು ಮರದಲಿ ಭೂತವೊಂದದು ಚಂದದಿಂದಲಿ ನೆಲೆಯನು
ಮಂದಿಕಾಣದ ತೆರದಿ ಮಾಡುತ, ಒಂದೆ ಇದ್ದುದು ತೋಷದಿ.

ಅದರ ಇರವನು ಅವರು ಅರಿಯದೆ, ಜಿಡದೆ ಕಡಿದರು ಮರವನು.
ಒದಗಿಸಿತ್ತರು ಒಡನೆ ಹಡಗವ ಕಡಿದ ವೃಕ್ಷದಿ ಕ್ಷಿಪ್ರದಿ.

ಮುದದಿ ಬಂದನು ದೇವಪಾಂಡ್ಯನು, ಅದನು ಇಳಿಸಲು ನೀರಿಗೆ.
ಕದಲಲಾರದು ಹಡಗು ಅಲ್ಲಿಂ, ಹದನ ತಿಳಿಯದು ಪಾಂಡ್ಯಗೆ.

ಒಡನೆ ಕೇಳಿತು ಕೂಗು ಒಂದೈ ಪೊಡವಿ ಬಿರಿಯುವ ತೆರದಲಿ
ನಡುಗಿ ಮಂದಿಯು ಕಡೆಗೆ ನಿಂದರು, ನುಡಿಯ ಕೇಳುವ ನೆವದಲಿ.

ಸ್ವರವು ಎಂದಿತು 'ನರನ ಒಪ್ಪಿಸು, ತರಿಸಿ ಅರ್ಪಿಸು, ಮೆಚ್ಚಿಸು,
ಸರಿಯಲಾರದು ನಾವೆ ನೀರಿಗೆ, ಬರಿಯ ಯತ್ನವು ಸಾಗದು'.

ಭೂತರಾಜನು ನುಡಿಯಲೀ ತೆರ ವ್ಯಥೆಯನಾಂತರು ಕೆಲವರು
ವೀಥಿ ಹಿಡಿದರು ಭೀತಿ ಪಡೆದರು ಮಾತನಾಡದೆ ಸಾರ್ದರು.

ಜೀವ ಹಾರಿತು, ಸೋವು ತಿಳಿಯಿತು ದೇವಪಾಂಡ್ಯಗೆ ಒಡನೆಯೆ
ಸಾವಧಾನದಿ ಸಾರಿಹೇಳಿದನೆಲ್ಲ ವಿವರವ ಪತ್ನಿಗೆ-

ಪತಿಯ ಮಾತನು ಕೇಳಿದಾಗಲೆ ಸತಿಯು ರೇಗುತ ನುಡಿದಳು.
'ಸತತವೀಯೆನು ಸುತನನೆ'ನುತಾ ಪಿತನ ಮನೆಯನು ಸಾರ್ದಳು.

ಏಳಲಾರನು ದೇವಪಾಂಡ್ಯನು ತಾಳಲಾರನು ದುಃಖವ.
'ನಾಳ ಕೊಯ್ದುಳೆ ಪತ್ನಿ' ಎನುತವ ಗೋಳ ಹಾಕುತಲೆಂದನು —

'ಕರವ ಹರುಷದಿ ಪಿಡಿದ ಮಡದಿಗೆ ಕರುಣೆಯೆಲ್ಲವು ಅಡಗಿತೆ!
ತರಳೆಯರ ನಾ ನಂಬಲೆಂತೈ ಧರೆಯೊಳೀ ಗತಿಯಾಯಿತೆ!

ಕಷ್ಟಕಾಲದಿ ಬಿಟ್ಟು ಪೋದಳು ದುಷ್ಟ ಹೆಂಗುಸು ರಕ್ಕಸಿ!
ಇಷ್ಟರೇತಕೆ? ಬಳಗವೇತಕೆ? ಕಷ್ಟಕಾಲದಿ ಒದಗದ?

ಹಡಗನಿಳಿಸುವ ರೀತಿ ತೋಚದು ದೇವನೊಬ್ಬನೆ ಬಲ್ಲನು'
ನುಡಿದು ಈ ತೆರ ಶೋಕಗೊಳುತಿಹನೆಡೆಗೆ ಬಂದಳು ಸೋದರಿ.

ಬಂದು ಕಂಡಳು, ನೊಂದುಕೊಂಡಳು; ಕಂದ ಜಯನನು ಕೊಟ್ಟಳು.
ಮುಂದೆ ಪ್ರಾಣವು ಬಂದು ತ್ರಾಣವು ನಂದಗೊಂಡನು ಪಾಂಡ್ಯನು.

ಮರುಕಬಿಟ್ಟನು, ಹರುಷಪಟ್ಟನು; ಕರೆಸಿಕೊಂಡನು ಆಳ್ಗಳ
ತರಳ ಜಯನನು ಬಲಿಯಕೊಡುವರೆ ಭರದಿ ನಡೆದರು ಸರ್ವರು

"ಬಲ್ಲವರೆ! ನೀವ್ ಕೊಲ್ಲಬೇಡಿರಿ; ಒಲ್ಲೆನೀತನ ಪ್ರಾಣವ
ಕಲ್ಲು ತಾನದು ಮರುಗದೇ ನಿಮಗಿಲ್ಲವೇತಕೆ ಕರುಣೆಯು?"

ಎಂದು ಹೇಳುತ ಭೂತರಾಜನು ಮುಂದೆ ಕಣ್ಮರೆಯಾದನು.
ಮುಂದಿಯಾಗಲೆ ದೂಡೆ ನಾವೆಯು ಬೇಗನಿಳಿಯಿತು ನೀರಿಗೆ.

ಕೆಲವು ಕಾಲದ ಮೇಲೆ ಹಡಗವು ಹಲವು ದೇಶವ ಬಳಸುತ
ನೆಲೆಗೆ ಬಂದಿತು; ಕೊನೆಗೆ ನಿಂದಿತು; ಬೆಲೆಯ ಒಡವೆಯ ತಾಳುತ

ಎಲ್ಲ ಒಡವೆಯ ಕೊಟ್ಟು ಜಯನಿಗೆ ಸೊಲ್ಲನೊಂದನು ಪಾಂಡ್ಯನು
ಮೆಲ್ಲನುಸುರಿದ "ನೆಲ್ಲ ಒಡವೆಯು ಸಂದಿತೀಗಳೆ ನಿನಗೆಯೆ"

ಕಟ್ಟು ಹುಟ್ಟಿತು ಹೊಸತು ಈ ಪರಿ, ಪಟ್ಟವಾಯಿತು ಜಯನಿಗೆ—
ಪುಟ್ಟನನು ಭೂತಾಳನೆನ್ನುತ ಅಟ್ಟಹಾಸದಿ ಕರೆದರು.

ಅಳಿದ ಬಳಿಕಾ ಮಾವನಾಸ್ತಿಯು ಅಳಿಯನಿಗಪ್ಪುದು ಎನುತಲಿ
ತುಳುವ ಜನರೊಳು ಶುರತೊಡಗಿದನಳಿಯಕಟ್ಟನು ನಾಡಲಿ.

# ಪ್ರತಿಧ್ವನಿ

ಗಿರಿಯ ಹುಲ್ಲುಗಾವಲಲ್ಲಿ
ಹಿರಿಯ ಕುರಿಯ ಮಂದೆಯನ್ನು
ಚರಿಸಿ ಮೇಯಬಿಟ್ಟು ಗೋಪಾಲನೊಬ್ಬನು
ನೆರಳ ಮರದ ಕೆಳಗೆ ಕುಳಿತು
ಬರಿದೆ ಕಾಲ ಕಳೆಯಲೆಂದು
ಮುರಲಿ ಬಾರಿಸುತ್ತ ಅದರ ಸೊಗದಿ ಮುಳುಗಿದ.

ಬಾರದಿರಲು ಮಿತ್ರರೆಲ್ಲ
ದೂರುತವರ ನಡೆದು ಮೆಲ್ಲ
ಏರಿಯೊಂದು ಶಿಖರವನ್ನು ಸುತ್ತ ಕಂಡನು.
ತೋರಲಿಲ್ಲ ಗೆಳೆಯರವನ,
ಏರಿತಂದು ಸಿಟ್ಟು ಮನವ;
ಸಾರಿ ಬಂದನಾಗಲೊಂದು ಗುಹೆಯ ಮಧ್ಯಕೆ.

ಕೊಳಲಿನಿಂದ ಅತ್ತ ಇತ್ತ
ಬಲದ ಕರದಿ ಎಡದ ಕರಕೆ
ನಲಿದು ಒಲಿದು ಹೊಡೆಯುತಿಂತು ಹಾಡತೊಡಗಿದ-
"ಗೆಳೆಯರಿಲ್ಲದಾಟವಿಲ್ಲ"
ಬಳಿಯ ಏರು ಬೆಟ್ಟದಿಂದ-
"ಗೆಳೆಯರಿಲ್ಲದಾಟವಿಲ್ಲ"ವೆಂದು ಹೊರಟಿತು.

"ತಾಯಿಗಿಂತ ಬಂಧುವಿಲ್ಲ"
ಮಾಯವಾಗದದುವೆ ನುಡಿಯು
"ತಾಯಿಗಿಂತ ಬಂಧುವಿಲ್ಲ"ವೆಂದು ಕೇಳಿತು.
ಬಾಯ ಹಲ್ಲುಗಳನು ಕಡಿದು
ಕಾಯ ನಡುಗಿ ಸಿಟ್ಟು ತಳೆದು
ಮಾಯೆಯನ್ನು ತಿಳಿಯದಿಂತು ತಿರುಗಿ ಕೇಳಿದ—

‘ಆತುಕೊಂಡ ಕಳ್ಳನಾರು?’
ಮಾತುಕೇಳಿದಂತೆ ಒಡನೆ
‘ಆತುಕೊಂಡ ಕಳ್ಳನಾರು?’ ಎಂದು ಕೇಳಿತು
ಭೀತಿಗೊಂಡು ಗೋಪಬಾಲ
ವೀಥಿ ಹಿಡಿದು ಮನೆಯ ಸೇರಿ
ತಾತಗೊರೆದ ನಡೆದ ರೀತಿಯೆಲ್ಲ ಕ್ಷಿಪ್ರದಿ.

‘ಅಪ್ಪ ನಾನು ಸೋಕೆನಿನ್ನು
ತಪ್ಪಿ ಕುಳಿತು ನಿಂದೆಗೈಯು-
ತಿಪ್ಪ ದುಷ್ಟ ಜನರಿಗಾನು ಭೀತಿಗೊಂಡೆನು.
ತಪ್ಪು ಮಾಳ್ಪ ವೈರಿಯನ್ನು
ಅಪ್ಪಳಿಸಿಯೆ ಬಿಟ್ಟರೇನು?
ತಪ್ಪು ಏನು ಒಪ್ಪರೇನು ಬಲ್ಲ ಮನುಜರು?’

‘ಪುಟ್ಟ ಬಾಲ ಅರಿಯೆ ನೀನು,
ಹುಟ್ಟ ನಗುವು ಬರುವುದೆನಗೆ,
ಬಿಟ್ಟದಲ್ಲಿ ನುಡಿದ ನುಡಿಯೆ ತಿರುಗಿ ಕೇಳಿತು.’
ಬಿಟ್ಟು ನೀನು ಬೇಸರನ್ನು,
ತೊಟ್ಟು ಪಿಡಿದು ಧೈರ್ಯವನ್ನು
ಕೊಟ್ಟು ಮನವ ತಿಳಿದುಕೊಳ್ಳು ಜಗದ ಮಾಯೆಯ.

‘ಹುಟ್ಟ ನೀನು ಫಲವದೇನು?
ಕೊಟ್ಟೆ ನಿನಗೆ ಬಟ್ಟೆ ನಾನು;
ಪಟ್ಟು ಕಷ್ಟವನ್ನು ದುಡಿದು ಅನ್ನವಿತ್ತೆನು.
ಕೆಟ್ಟರಾರು? ಇಷ್ಟರಾರು?
ಪುಟ್ಟ! ನಿನಗೆ ಎಲ್ಲ ನೀನೆ;
ಗುಟ್ಟನರಿಯೋ ಕೊಟ್ಟುಪಡೆಯೋ’ ಎಂದ ತಂದೆಯು.



# ಗಡಿಯಾರ

ಗಂಟೆಯು ನೆಂಟನೆ ಓ ಗಡಿಯಾರ,
ಬೆಳ್ಳಿಯ ಬಣ್ಣದ ಗೋಳಾಕಾರ,
ವೇಳೆಯ ತಿಳಿಯಲು ನೀನಾಧಾರ
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ಹಗಲೂ ಇರುಳೂ ಒಂದೇ ಬಾಳು,
ನೀನಾವಾಗಲು ದುಡಿಯುವ ಆಳು,
ಕಿವಿಯನು ಹಿಂಡಲು ನಿನಗದು ಕೂಳು
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ಮುಖ ಒಂದಾದರು ದ್ವಾದಶ ನೇತ್ರ,
ಎರಡೇ ಕೈಗಳು ಏನು ವಿಚಿತ್ರ!
ಯಂತ್ರ ಪುರಾಣದ ರಕ್ಕಸ ಪುತ್ರ;
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ಟಿಕ್ ಟಿಕ್ ಎನ್ನುತ ಹೇಳುವೆಯೇನು?
ನಿನ್ನೀ ಮಾತಿನ ಒಳಗುಟ್ಟೇನು?
'ಕಾಲವು ನಿಲ್ಲದು' ಎನ್ನುವಿಯೇನು?
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ದುಡಿಯುವುದೊಂದೇ ನಿನ್ನಯ ಕರ್ಮ
ದುಡಿಸುವುದೊಂದೇ ನಮ್ಮಯ ಧರ್ಮ
ಇಂತಿರುವುದು ಕಲಿಯುಗದೀ ಧರ್ಮ
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

—ದಿನಕರ ದೇಸಾಯಿ

# ನರಿಯೂ ಕೋತಿಯೂ



(ಉಡುಪಿ ಶ್ರೀ ಅನಂತೇಶ್ವರ ಶಾಲಾ ವಿದ್ಯಾರ್ಥಿನಿಯರು
ಈ ಪದ್ಯ ಹಾಡುತ್ತಾ ಕೋಲಾಟವಾಡುವುದು)

ನರಿ: ಏರಿದ ಮರದೊಳು ಹಾರುತ ಮುದದೊಳು
ಯಾರನು ಅಣಕಿಪೆ? ವಾನರನೆ!
ಮೋರೆಯ ತಿರುಗಿಸಿ ಓರೆಯ ನೋಟದಿ
ಪೋರನೆ ನೋಡುವುದಾರನೆಲೆ!
ನೀರನು ಕುಡಿಯಲು ಬಂದಿಹ ಎನ್ನನು
ಬಾರಿಗು' ಬಾರಿಗು' ಅಣಕಿಪೆಯು?
ಕಾರಣವಿಲ್ಲದೆ, ನ್ಯಾಯವನೊಲ್ಲದೆ,
ಚೋರನೆ! ನಿಂದಿಪೆಯೇಕಿಂತು?
ಅರಿತಿಹೆ ನಿನ್ನಯ ಪರಿಯನು ವನಚರ!
ಇರಿಸಿದ ಬುತ್ತಿಯ ತಿಂತೇಗಿ,
ಕರದೊಳು ಉಳಿದಿಹ ಮೊಸರನು ಆಡಿನ
ಮೋರೆಗೆ ಒರಸಿದೆ ನೀ ಹಿಂದೆ.

**ಕೋತಿ:** ಬಣ್ಣಿಸು ನಿನ್ನಯ ಕಳ್ಳನ ಕಥೆಯನು—
ಮೆಲ್ಲನೆ ಹಳ್ಳಿಯ ನೀ ಸಾರಿ
ಮುಳ್ಳಿನ ಸಾತಿಯು, ಕೋಳಿಗಳೆಲ್ಲವ
ಕೊಲ್ಲುತ ಸವಿಯುವೆ; ಜಂಬುಕನೆ!

ಹಿಂದಕೆ ಕಾಗೆಯು ಚಂದದಿ ಹೊಗಳುತ
ಪೊಂದಿದೆ ಮಾಂಸವ ಕಪಟದಲೀ.
ಗಾರ್ದಭವೊಂದನು ಮದುವೆಗೆ ಎನ್ನುತ
ಸಿಂಹದಿ ಕೊಲ್ಲಿಸಿ ನೀ ತಿಂದೆ.

**ನರಿ:** ಸಿಗಿದಿಹ ಮರದೊಳು ಬಿಗಿದಿಹ ಗೂಟವ
ತೆಗೆದವನಾರದು? ಬಾಲವನು
ಹೊಗಿಸುತ ಎಡೆಯೊಳು ಬಗೆಬಗೆ ತೆರದೊಳು
ನಗೆಗೊಳಗಾದವನಾರಯ್ಯ?

**ಕೋತಿ:** 'ನಾಳೆಗೆ' ಎನ್ನುತ ಹೆಣವನು ಭುಜಿಸದೆ
ಬಿಲ್ಲಿನ ನಾರನು ಜಗಿಯುತ್ತ
ನಿನ್ನಯ ಕುಲಜನು ಕ್ಷಣದೊಳು ಮಡಿದನು
ತನ್ನಯ ಆಶೆಯು ಮಿತಿಮೀರಿ.

**ನರಿ:** 'ಪಾಲನು ಮಾಡುವೆನೆ'ನ್ನುತ ತ್ರಾಸಿನ
ಕೋಲನು ಪಿಡಿಯುತ ಬಂದಂದು,
ಬೆಣ್ಣೆಯನೆಲ್ಲವ ಬೆಕ್ಕುಗಳಿಂದಲಿ
ವಂಚಿಸಿ ತಿಂದವ ನೀನಲ್ಲೆ?

**ಕೋತಿ:** ಕಡಲನು ದಾಂಟುತ ಪೊಡವಿಜೆ ಸೀತೆಯ
ಬಿಡದೆಯೆ ಅರಸಿದ ಪವನಜನ
ಕುಲದೊಳು ಜನಿಸಿದವರು ಎಲೆ! ಗುಡಿಯಲಿ
ನಿತ್ಯವು ಪೂಜೆಯ ಕೊಂಬವರು.

**ನರಿ:** ಕಾಡೊಳು ಪೂರ್ವದಿ ಕೇಸರಿ ಮೃಗಗಳ
ನೋಡಿದ ಕ್ಷಣದೊಳು ತಾ ಪಿಡಿದು
ಆಡುತ ಭುಂಜಿಸಿ ದರ್ಪದಿ ಬದುಕಿರೆ,
ಕಾಡಿನ ಬಾವಿಗೆ ಕೆಡಹಿದೆನು.

**ಕೋತಿ:** 'ಬಾರಿ ಕುತಂತ್ರವ ಬಲ್ಲೆನು'ಎನ್ನುತ
ಬೇಟೆಯುಗಾರನ ನಾಯಿಗಳ
ಮಧ್ಯದಿ ಸಿಲುಕಿದ ನರಿಯದು ಯಾವುದು?
ಬೇಗನೆ ದಯದೊಳು ಪೇಳುವೆಯಾ?

**ನರಿ:** ನಿಂದೆಯ ಗೈವುದು ಅಂದವೆ? ವಾನರ
ಮುಂದಕೆ ಗೆಳೆಯರು ನಾವಯ್ಯ!
ಇಂದಿನ ಜಗಳವ ಬಿಟ್ಟೆನು, ದಿಟವಿದು,
ಮುಂದಕೆ ಚಂದದಿ ನಾವಿರುವ.
ನಾನೂ ನೀನೂ ನೆನೆಯುವ ಭೇದವು
ನಮ್ಮಯ ಪತನಕೆ ಕಾರಣವು.
ಮುಂದಕೆ ನಾವೀ ಭೇದವ ನೀಗುತ
ಪ್ರೇಮದಿ ಬಾಳುವ ಸುಖಿಸುತ್ತ,
ಕುಲವದು ಮನ್ನಣೆ ಪಡೆಯದು ವಂದನೆ
ಶೀಲವೆ ಶ್ರೇಷ್ಠವು ಲೋಕದೊಳು.
ಮೇಲಿನ ಜಾತಿಯು ಕೀಳಿನ ಜಾತಿಯು
ಎಲ್ಲವು ವ್ಯರ್ಥವು ಯೋಚಿಸಲು.

---

## ಚಲಚ್ಚಿತ್ರ

ಬೆರಗುಗೊಳಿಪುದು ಹರುಷಗೊಳಿಪುದು,
ಅರಿವು ಬರುವುದು ಸಿನೆಮದಿ.
ಸರುವ ಕಥೆಯನು ತೋರಿ ವ್ಯಥೆಯನು
ಒರಸಿ ಬಿಡುವುದು ನಿಮಿಷದಿ.

ಎಲೆಲೆ! ಮಾನವ! ಒಲಿದು ಜ್ಞಾನವ
ಕಲಿಪುದಲ್ಲವೆ ಸರ್ವವ?
ಜೆಲೆಯ ಕೊಟ್ಟರು ಸಮಯ ಕೆಟ್ಟರು
ಚೆಲುವ ನೋಡುವ ಯೋಗವ.

ಕಳ್ಳ ಕಾಣುವ ಸುಳ್ಳು ಹೇಳುವ;
ಕನ್ನ ಹಾಕುವ ದಾರಿಯಾ
ಹಳ್ಳಿ ಜನರಿಗೆ ನೋಡಲಿಲ್ಲವು
ಎಲ್ಲ ಸುಖಗಳು ಪೇಟೆಯಾ.

ಅರಸ ಬರುವನು, ಅರಸಿ ಬರುವಳು,
ಹರುಷಗೊಳಿಪರು ಜನರನು,
ಸರಸ ನರ್ತನ, ಸುರಸ ವರ್ತನ,
ಸರಸ ಅಭಿನಯ ತೋರ್ಪರು.

ಏನು ಚೋದ್ಯವು! ಏನು ಮಾನ್ಯವು!
ಏನು ಸಾಹಸ ನೋಡಲು!
ಏನು ಪ್ರೀತಿಯು! ಏನು ಭ್ರಾಂತಿಯು!
ಏನು ಭಕ್ತಿಯು ನುಡಿಯಲು!

ಸತಿಯ ಮರ್ಮವ, ಪತಿಯ ಕರ್ಮವ,
ಸುತನ ಧರ್ಮವ ಸಾರುತ
ಕಥೆಯು ಸಾಗಲು ಮತಿಯು ಬಿರಿವುದು,
ಅತುಳ ವೈಭವ ನೋಡುತ.

ದುಷ್ಟ ಜನರಿಗು ಶಿಷ್ಟ ಜನರಿಗು
ಹುಟ್ಟಿಸುತ್ತಲಿ ಬುದ್ಧಿಯಾ
ನಷ್ಟವಿಲ್ಲದೆ, ಕಷ್ಟವಿಲ್ಲದೆ,
ಸೃಷ್ಟಿವೆಲ್ಲವ ತೋರ್ಪುದು.

ಕಟ್ಟು ಕಥೆಗಳ ಹುಟ್ಟಿಸುತ್ತಲಿ
ಅಟ್ಟಹಾಸದಿ ಮೆರೆವುದು.
ಇಟ್ಟು ಮನವನು, ಕೊಟ್ಟು ಧನವನು,
ಕೆಟ್ಟದೊಂದನು ನುಡಿಯದು.

---

## ನೀತಿಮಾರ್ಗ

ಮಗುವೆ! ಕೆಲಸವ ಮಾಡು, ಜಗದಿ ನಾಳೆಗೆ ಎಂದು
ಬಗೆಯದಿರು; ಅತಿ ಸುಲಭವಹುದು ನಿನಗೆ.
ಹಗೆಯ ತಾಳಲು ಬೇಡ, ಹೆಗಲಿಗೆ ಹೆಗಲನಿತ್ತು
ಸೊಗಸಿಂದ ಐಕ್ಯದಿರು ಸರ್ವರಲಿ ಸುಖದಿ.
ಸ್ಮರಿಸು ದೇವರ ದಿನವು, ಇರಿಸು ಗುರುವೊಳು ಭಕ್ತಿ,
ನಿರತ ಧರ್ಮವ ಮಾಡು, ಕೆಡಬೇಡ ನೀ,
ಸರಳ ಹೃದಯವೆ ಲೇಸು, ಪರರ ಸೇವೆಗೆ ಹೇಸು.
ಕರುಣೆಯನು ದೀನರಲ್ಲಿಡೆ ಮರೆವುದೆ?
ರೀತಿಯನು ತಿಳಿ ಜನರ, ನೀತಿಯನು ಕಲಿ ಜಗದ,
ಜಾತಿಭೇದವನೆಣಿಸಬೇಡ, ಮಗುವೆ!
ಮಾತು ನೀ ಸವಿಯಾಡು, ಮಾತಿಗೊಲಿಯಲು ಬೇಡ,
ಘಾತಿಸುವ ಮನ ಬೇಡ, ಘನತೆಯಲ್ಲ.
ಸತ್ಯ ವಚನವನಾಡು, ಮಿಥ್ಯ ನುಡಿಗಳ ಕಳೆಯು,
ಸುತ್ತುತಿಹ ಚಿತ್ತವನು ಸ್ಥಿರವಾಗಿಸು.
ಉತ್ತಮ ನಡತೆಯಲಿರು, ಹೊತ್ತ ಕೆಲಸವ ಮುಗಿಸು,
ಮತ್ತದನು ಅರ್ಧದಲಿ ಬಿಡೆ ಸಲ್ಲದು.
ಆಳೆನಿಸಿ ದುಡಿದುಣ್ಣು ಆಳುವರಸನ ತೆರದಿ,
ತಾಳು ಶಾಂತಿಯ ಮನದಿ ಬಾಳು ಸುಖದಿ.
ನಾಲಗೆಯ ಕೆಡಿಸದಿರು, ಸಾಲವನು ಮಾಡದಿರು,
ಬಾಲ ನೀ ನುಡಿಗೇಳು ಲೀಲೆಯಿಂದ.

ಗಳಿಸೊ ವಿದ್ಯೆಯ ಸಿರಿಯ, ಕುಲವ ಬೆಳಗಿಪ ರವಿಯ,
ಬೆಳೆಸು ನಿನ್ನಲಿ ಧರ್ಮಸಿಧಿಯನ್ನೆಲೆ!
ಸಿಲುಕದಿರು ಕೆಡುಕರಲಿ, ಬಳಸಿ ಬಹ ಆಪತ್ತು-
ಗಳಿಗೆ ಸೀನಳುಕದಿರು ಮರುಗಬೇಡೈ.
ಹುಟ್ಟಿದೀ ಮಾತೆಯಲ್ಲಿಟ್ಟು ಪ್ರೇಮವನುದಿನ,
ಕೊಟ್ಟು ತನು ಮನ ಧನವ ಸೇವೆಮಾಡು,
ಕಟ್ಟಳೆಯ ಮೀರದಿರು, ಸೃಷ್ಟಿಗೊಡೆಯನನೊಲಿಸು,
ಕಷ್ಟನಷ್ಟವನೆಣಿಸದಿರು ನೀತಿಯಿಂ.

---

## ಗೋರಕನಾಥನ ಗುರುಭಕ್ತಿ.

ನಡೆದು ಬಳಲುತ, ಪಸಿವು ತಾಳುತ, ಅಡವಿ ಮಧ್ಯದಿ ತಂಗುತ-
'ನಡೆಯಲಾಗದು, ನುಡಿಯಲಾಗದು, ತಡೆಯಲಾಗದು ಪಸಿವನು;
ಸಾಗು ಈಗಲೆ! ಶಿಷ್ಯ ಪೋಗಲಿ ಪೋಗಿ ತಾರಲೆ! ಭಿಕ್ಷೆಯಾ'
ಹೀಗೆ ನುಡಿಯಲು ಗುರುಮಚ್ಛೇಂದ್ರನು, ಬಾಗಿ ಮಣಿಯುತ ಗೋರಕ.
ಹಿಡಿದು ಬಂದನು, ಪಾತ್ರೆಯೊಂದನು; ಬಿಡದೆ ಸೇರಿದ ಪುರವನು.
'ಕೊಡಿರಿ ಭಿಕ್ಷೆಯ, ಪಡೆಯಿರಕ್ಷಯ ಪೊಡವಿಯಲಿ ಸತ್ಕೀರ್ತಿಯಾ'
ಎಂದು ಮುಂದಿನ ಸದನದೆಮರಲಿ ನಿಂದು ಬೇಡಲು ಒಡತಿಯು
ಬಂದು ಬಿಟ್ಟಳು ತಂದುಕೊಟ್ಟಳು, ಅಂದೆ ಮಾಡಿದ ಹೋಳಿಗೆ.
ನಂದಗೊಂಡನು, ಬಂದು ಕಂಡನು, ವಂದಿಸುತ್ತಲೆ ಗುರುವನು.
ಮುಂದಕಿಟ್ಟನು ತಂದ ಭಿಕ್ಷೆಯ; ತಿಂದು ತೇಗಿದನಾ ಗುರು.
ಮುಂದೆ ಹೇಳಿದ 'ಕಂದ, ನಾಳಿದನಿಂದಿನಂತೆಯೆ ಬೇಡುತ
ತಂದು ನೀ ಕೊಡು ರುಚಿಗೆ ಸೋತೆನು' ಎಂದಡೊಪ್ಪಿದ ಶಿಷ್ಯನು.
ದಿನವು ಅಂದಿನ ಕಳೆದು ಮುಂದಿನ ದಿನವು ಬರಲಾ ಗೋರಕ
ಮನೆಗೆ ಬಂದನು, 'ಕೊಡಿರಿ ಎಂದನು, ಮನೆಯ ಮಾನಿನಿ ಧಾನ್ಯವ
ತರಲು ನುಡಿದನು-'ಅಮ್ಮ, ಬೇಡಿದು, ಕರುಣದಲಿ ಕೊಡಿ ಹೋಳಿಗೆ'
ಪರಮಶ್ರೇಷ್ಠರೆ! ಮುಗಿದು ಹೋಯಿತು, ಇರದು, ಹೋಳಿಗೆ' ಎಂದಳು.

ಕೇಳಲಾರನು, ಏಳಲಾರನು, ತಾಳಿಕೋಪವ ಹೇಗುಸು
'ಕೀಳು ಕಣ್ಣನು ಕೊಡುವೆ ಹೋಳಿಗೆ' ಹೇಳಿದಾಗಲೆ ನಯನವ
ಕಿತ್ತು ಬಿಟ್ಟನು, ಅದನು ಕೊಟ್ಟನು, ಒತ್ತಿ ಸುರಿಯಿತು ರಕ್ತವು
ಮತ್ತೆ ಹೆಂಗುಸು ಭಯದಿ ಹೋಳಿಗೆ ಇತ್ತಲಾಗಲೆ ಒದಗಿಸಿ.

ಕೊಡಲು ಗುರುವಿಗೆ ತಂದ ಭಿಕ್ಷೆಯ ಒಡನೆ ಭಕ್ಷಿಸಿ ನೋಡಿದ;
ಬಿಡದೆ ಸುರಿಯುವ ರಕ್ತ ಕಣ್ಣಿನ ನಡೆದುದೆಲ್ಲವ ಕೇಳಿದ.
"ಎಲೆಲೆ ಶಿಷ್ಯನೆ! ನಿನಗೆ ಎನ್ನಲಿ ನೆಲಸಿ ಇದ್ದರೆ ಪ್ರೀತಿಯು
ತಳುವದೀಗಲೆ ಉಳಿದ ಕಣ್ಣನು ಸುಲಿದು ಕೊಡು ನೀ"–ಎಂದನು.

ಅಳುಕಲಿಲ್ಲವು, ತಳುಕಲಿಲ್ಲವು; ತಳೆದು ಧೈರ್ಯವ ಶಿಷ್ಯನು
ಉಳಿದ ಕಣ್ಣನು ಕಳಚಿಕೊಟ್ಟನು, ಬಳಿಯಲಿಟ್ಟನು ಶ್ರೇಷ್ಠನು.
ಏನು ಪ್ರೀತಿಯು! ಏನು ಭಕ್ತಿಯು! ಏನನೆಂಬೆನು ಧೈರ್ಯವ!
ದಾನಶೀಲರೆ! ದೀನ ಬಾಲರೆ! ಸಾನುರಾಗದಿ ಕೇಳಿರಿ!

ಗುರುವು ಶಿಷ್ಯನ ಪರಮ ಭಕ್ತಿಗೆ ತ್ವರದೆ ಮೆಚ್ಚಿದ ಅಪ್ಪಿದ;
ಕರವನಾಡಿಸಿ ಎರಡು ಕಂಗಳ ಸರಿಯಗೊಳಿಸಿದ ಕ್ಷಿಪ್ರದಿ.

---

## ಹಂಸವೂ ಕಾಗೆಯೂ

**ಕಾಗೆ:** ಎಲೆ ಗೆಳೆಯ! ಮಾನವರಿಗುಪಕಾರವನ್ನು
ಸುಳಿಸುಳಿದು ನಾ ಗೈವೆನನುಗಾಲವಿನ್ನು
ಕೊಳಕು ದುರ್ವಾಸನೆಯ ನಿರ್ಮೂಲ ಗೈದು
ತಳೆವೆನಾನಂದವನು; ನಿಂದಿಪರು ಬೈದು.

ಪರಿಪರಿಯ ಸೇವೆಯನು ಗೈದರೆಯು ನನ್ನ
ತರತರದಿ ಬಡಿಬಡಿದು ಕೊಡುವರೈ ಬನ್ನ!
ದುರುಳರಹ ಜನರೆಲ್ಲ "ಅಶುಭ"ನಾನೆಂದು
ಸರಸರನೆ ಎಸೆಯುವರು ಕಲ್ಲ ಹಾರೆಂದು!

**ಹಂಸ:** ಓಸ ನೀ, ದೂರದಿರು ಜನರನ್ನು ಜೋಕೆ!
ಏನೆಲವೊ ಉಪಕಾರ ನಿನ್ನಿಂದ ಜನಕೆ?
ಮಾನವರಿಗುಪಕಾರದಿಂ ಮಿಗಿಲು ಗೋಳು
ಮಾನಿಸರೆ ಇರಲಾಗ ನನ್ನಂತೆ? ಹೇಳು.

ನಿನ್ನ ಪಡೆಗಿಲ್ಲವೈ ಜಗದಾದಿ ಅಂತ್ಯ;
ನಿನಗಿಲ್ಲ ಪ್ರೈಬಣ್ಣ ಜನರೊಪ್ಪುವಂಥ;
ಬಣ್ಣವೆಂತೂ ಕಪ್ಪು; ಸ್ವರವಾದರಿಂಪೆ?
ಬನ್ನಗೊಳಿಪರು ಮತ್ತೆ ಜನರು ಬಡಿದಂತೆ!

**ಕಾಗೆ:** ಒದರದಿರು ಮನುಜರಿಗೆ ನಿನ್ನಲ್ಲಿ ಪ್ರೀತಿ!
ಮುದದಿಂದ ಬಣ್ಣಿಪರು ಕವಿಗಳೀ ರೀತಿ-
ಮೊದಲು ನಿನ್ನಾಗಮನವೇ ಚಂದವಂತೆ!
ಉದಕ ಹಾಲಲಿ ನಿನ್ನಯಾದರ್ಶವಂತೆ!

ಜಗದೊಳೀ ಪರಿ ನಿನ್ನ ಮಾನಿಸುತ್ತಿರುವ
ಬಗೆಯನೆನಗೊರೆಯುವೆಯ ಸಹಿತ ಕಾರಣವ,
ಸೊಗಸಿನಲಿ ನೀನೇನು ಹೇಳೆನಗೆ ನವಿಲೆ?
ಬಗುಳದಿರು ನಿನ್ನದೇಂ ಬಂಗಾರದೊಡಲೆ?

**ಹಂಸ:** ಮನುಜರಿಗೆ ಅಪರೂಪವಾಗಿಹೆನು ರಾಯ!
ಮನಸಿಗಪರೂಪನೇ 'ಅಪರಂಜಿ' ಗೆಳೆಯ!
ದಿನ ನಿತ್ಯ ನಿನ್ನನ್ನು ಕಂಡು ಸಾಕಾಗಿ,
ಮುನಿದೆದ್ದು ಹೊಡೆಯುವರು ಹೋಗಬೇಕಾಗಿ.

ಮುನಿಯಂತೆ ನಾನು ಚೆಲು ಮೌನದಿಂದಿಹೆನು
ಗುಣಿಜನರ ಗೋಜಿಗಿಲ್ಲದೆ ಶಾಂತವಿಹೆನು.
ಮನ ಮೆಚ್ಚೆ ಸರಸಿಯಲಿ ವಾಸಿಯಾಗಿಹೆನು
ಇನಿತಿರುವ ಎನ್ನ ವಿಭವಕ್ಕೆ ಎಣೆಯೇನು?

ಚಿತ್ತಾಕರ್ಷಣದ ದೇಹದಿಂದಿರುವೆ.
ಮತ್ತೆ ಆದರ್ಶ ನಡೆಯಿಂದ ಕೂಡಿರುವೆ.
ಚಿತ್ತ ಮೆಚ್ಚುವ ತಿಳಿಯ ತಿನಿಸನ್ನೆ ಮೆಲುವೆ.
ಮತ್ತೆ ಪೃಥ್ವಿಯ ಸೊಬಗ ಮಣಿಯಂತೆ ಮೆರೆವೆ.
ನೀರಸನು ನೀನಾದೆ ಸಾಮಾನ್ಯ ಪಕ್ಷಿ,
ಸಾರಸನು ನಾನು; ಬಲು ಅಪರೂಪ ಪಕ್ಷಿ,
ಊರೆಲ್ಲ ಹಳಿಯುವರು, ನಿನಗೋರೆ ದೃಷ್ಟಿ,
ಸಾರಿ ಹೊಗಳುವರೆನ್ನ ಸೌಂದರ್ಯ ಸೃಷ್ಟಿ.

**ಕಾಗೆ:** ಸಾಕು, ಸಾಕೆಲೆ! ಜಂಭ ಒತ್ತಟ್ಟಗಿರಲಿ,
ಯಾಕೆ ಹಿಗ್ಗುವೆ ಸೊಬಗಿಗೀ ಲೋಕದಲ್ಲಿ?
ಶೋಕವಿದೆ, ಮರಣವಿದೆ, ನಿನಗೆ ತಿಳಿದಿರಲಿ!
ಯಾಕೆಲ್ಲ ವಾಗ್ವಾದ ನಮಗಕಾಲದಲಿ?
ಉಪಕಾರ ಮಾಡಿದರೆ ಲೋಕದೊಳು ಈಗ
ಅಪಕಾರ ಮಾಳ್ಪರು ಕೃತಘ್ನರೈ ಬೇಗ.
ತುಪ್ಪಕ್ಕೆ ಮಿಗಿಲು ಬೆಲೆ ಇದ್ದರೇನಾಯ್ತು!
ಉಪ್ಪಿಲ್ಲದೂಟವೇ? ಪೋಪೆ ಸಾಕಾಯ್ತು!

---

## ಅಮ್ಮನ ಅರಿವು

ತಾಯಿಯೇ ಲೋಕದಲಿ ನಿಜವಾದ ಬಂಧು
ತಾಯಿಯೇ ಮಕ್ಕಳಾ ಪ್ರೀತಿಯಲಿ ಮುಂದು;
ತಾಯಿಯೆಂದರೆ ಮಾನವಗೆ ಮಾತ್ರವಲ್ಲ,
ಬಾಯಿ ಬಾರದ ಪ್ರಾಣಿಗಳಿಗಿರುವಳಲ್ಲ—
ಮೃಗಪಕ್ಷಿಗಳು ಬಂದು ತಾಯ ಬಳಿ ಸೇರಿ
ನಗುತ ನಲಿನಲಿದಮ್ಮಯೆನ್ನುವವು ಹಾರಿ.
ಬಗೆಬಗೆಯ ರೀತಿಯಿಂ ತಾಯಿ ಕೊಂಡಾಡಿ
ಹಗಲಿರುಳು ಸುಖಿಸುವವು ತಾಯನೊಡನಾಡಿ.

ಪರಿಕಿಸಲು ಭೂಮಾತೆ ತಾನು ನಿಜವಾಗಿ
ತಿರುಗುವಳು ತಾಯಿಯಾ ಗುಣದಿ ಲೇಸಾಗಿ
ತರಳರೆಲ್ಲರ ಕ್ಷೇಮದಲಿ ಮಗ್ನಳಾಗಿ
ಪೊರೆವ ಭೂಮಾತೆ ನೀನಿರುವೆ ಮಿಗಿಲಾಗಿ.

ನಿನ್ನಣುಗ ಗೈಯುವಾ ತಪ್ಪನ್ನು ನೋಡಿ
ಬೆನ್ನು ತಟ್ಟುವೆ ಕ್ಷಣದೆ ಕ್ಷಮೆಯನ್ನು ನೀಡಿ.
ಅನ್ಯಾಯವಾದುದನು ಸರಿಯೆಂದು ಮಾಡಿ
ಧನ್ಯೆಯಾ ನೀ ಸುತರ ಚಿಂತೆಯಿಂ ಕೂಡಿ.

ಅವರವರು ಬೇಡುವುದ ನೀಡುತಿಹೆ ಮಾತೆ,
ಮಮತೆಯಲಿ ಸವಿ ವಚನವಾಡುವಾ ಖ್ಯಾತೆ,
ಅವನಿಯಲಿ ಪೂಜಿತಳೆ! ರಾಜಿತಳೆ! ನಿನಗೆ
ಅವನೀಶನಾದರೂ ಮಗನವನು ಕೊನೆಗೆ.

ಅಕ್ಕರೆಯ ಚಿಕ್ಕ ಮಕ್ಕಳಿಗೆ ಆಟವನು
ತಕ್ಕಂತೆ ಬೋಧಿಸುವೆ ಕೂಡಿ ಪಾಠವನು.
ಚಿಕ್ಕತನದಲಿ ನಮಗೆ ಎದೆಯ ಹಾಲೆರೆದು,
ಇಕ್ಕಿ ಉಪ್ಪನ್ನಗಳ ದಣಿದೆಯಾ ಪೊರೆದು.

ಆಪತ್ತು ಬರಲಾಗ ಕಂದನನು ಕರೆದು
ಸೋಪಾಯದಿಂ ಜತನಗೊಳಿಪೆ ಮುನ್ನಡೆದು
ಜೀವನದ ಗುರಿಯನೆಡೆಬಿಡದೆ ಸುತಗೊರೆದು
ಪಾವನವ ಗೊಳಿಪೆಯಿಲೆ, ಮನುಜ ಜನುಮವನು.

ಇನಿತು ಪ್ರೀತಿಸುವ ತವ ಪಾದಸೇವೆಯನು
ಅನವರತ ಗೈದರೆಯು ಋಣ ತೀರ್ವುದೇನು?
ಹಣೆ ಕೊಯ್ದು ಮಣೆಗೈದು ನಿನಗಿತ್ತರೇನು?
ಮನವೊಲಿದು ಸೇವಿಪಾ ಬುದ್ಧಿ ಕೊಡು ನೀನು.

## ಮಳೆಗಾಲದ ದುರ್ದಿನ

ಮೂಡಡೆಯ ದಿನಕರನು ಉಂಟಾದ ದಿನವು,
ಮೋಡರಾಜನು ವಿಜಯಗೊಂಡ ಕರಿದಿನವು:
ನಾಡೆಲ್ಲ ಉತ್ಸಾಹವನೆ ಕಳೆದ ದಿನವು,
ಕೂಡಿ ಮಳೆ ಸುಳಿಗಾಳಿ ಇರ್ದ ದುರ್ದಿನವು.

ದಿನಮಣಿಯ ಆಗಮನವಿರದೆ ಜೀಸತ್ತು,
ಜನನಿ ಭೂಮಿಯೆ ತಾನು ಮುಸುಕ ಧರಿಸಿತ್ತು
ದಿನರಾತ್ರಿ ಗಗನದಲಿ ಕರಿಮೋಡವಿತ್ತು;
ಮನ ಹರಿಪ ಬೇರೊಂದು ಶಿಖರದಂತಿತ್ತು.

ಗಡಗುಟ್ಟಿ ನಡುಗಿಸುವ ಕಡು ಶೀತಗಾಳಿ
ಎಡೆಬಿಡದೆ ಬೀಸಿದುದು ಶಕ್ತಿಯನು ತಾಳಿ.
ಗುಡುಗುಡೆನ್ನುವ ಸಿಡಿಲದೊಂದೊಂದು ಬಾರಿ
ಸಿಡಿಯುತಿದ್ದಿತು, ಮೊದಲು ಮಿಂಚನ್ನು ಕಾರಿ.

ಹತ್ತು ಹೊಡೆಯಿತು, ಹಕ್ಕಿಗಳು ಗೂಡು ಬಿಟ್ಟು
ಸುತ್ತಲೊಲ್ಲವು ಹೊರಗೆ ಹರಿಗೆ ಪ್ರೊಡಮಟ್ಟು.
ಎತ್ತಲೂ ಕಾಗೆಗಳ 'ಕಾಕಾರ' ವಿಲ್ಲ;
ಮತ್ತೆ ಚೆಲು ಹಕ್ಕಿಗಳ 'ಚಿಲಿಪಿಲಿ' ಗಳಿಲ್ಲ.

ಹುಡುಗ ಹೊರಹೊರಡದಿರೆ ಯಜಮಾನಿ ಕೂಗಿ,
"ಬಿಡು ಬೇಗ ನಡೆ" ಎಂದು ನುಡಿದಳೈ ರೇಗಿ,
ಹಿಡಿದು ಗೊರಗನು ಹುಡುಗ ದನಗಳನು ಬಿಡಲು,
ನಡೆಯಲೊಲ್ಲವು ಹೊರಗೆ, ನಡುಗಿದುದು ಒಡಲು.

ಬಂದು ಅಂಗಳಿಗೆ ಗದ್ದೆಯನು ನೋಡುತಿದ್ದ,
ಅಂದದೆಳೆ ಬೆಳೆ ಕಂಡು ನಂದಗೊಳುತಿದ್ದ,
ಬಂದವರ ಕರೆಕರೆದು ಮಾತಾಡುತಿದ್ದ,
ಅಂದದೀ ಪರಿಯು ಮುಂಜಾನೆ ಕಳೆದಿದ್ದ–

ಒಕ್ಕಲಿಗರಿಂದೆಲ್ಲ ಹೊರಬಂದುದಿಲ್ಲ;
ಪಕ್ಕದಲಿ ನಿಂತಿಣಿಕಿದರು ಸಂದವಿಲ್ಲ.
ಉಕ್ಕಿಬಹ ಉದ್ಗಾರವೆತ್ತುತ್ತ ಕೆಲರು
ಪುಕ್ಕರಿದ್ದರು ಒಳಗೆ, ಹೊರಗೆ ಕಾಲಿಡರು.

ಮುದುಕನೊಬ್ಬನು ಹಾಸು ಬಿಟ್ಟೇಳಲಿಲ್ಲ.
ಕದಲಲಾರರು ಬಾಲಕರು, ಪಾಠವಿಲ್ಲ,
ಹೊದೆದು ಕರಿ ಕಂಬಳಿಯ ತಾಯ ಕಾಡುತ್ತ,
"ಒದಗಿಸೌ ತಿನಿಸುಣಿಸು ಬೇಗ" ಎನ್ನುತ್ತ!

ಎಲ್ಲೆಲ್ಲಿ ನೋಡಿದರು ಆಲಸ್ಯ ಬೀಡು!
ಇಲ್ಲವೈ ನಿಯಮ ಉದ್ಯೋಗಗಳ ಹಾಡು!
ಎಲ್ಲೆಲ್ಲಿ ನೋಡಿದರು' ಗೊಂದಲವೆ ಕೂಡಿ,
ಕಲ್ಲಿನಿಂ ಕಡೆಯಾಯ್ತು ಚಳಿಯಿಂದ ಕೋಡಿ.

ದಿನಕರನು ಒಮ್ಮೆ ಬಲು ಆಯಾಸದಿಂದ
ಜನರನಿಣಿಕಿದನು ಬಲು ಶಾಂತ ಮುಖದಿಂದ
ಜನನಿ ಭೂಮಿಯು ಮೈಯ ಕೊಡವಿದಳು ಬೇಗ,
ದಿನಮಣಿಯು ನುಂಗಿದನು ಕರಿರಾಜನಾಗ.

ಸುರಿಯಿತಾಗಲೆ ವರ್ಷ ಬುವಿಗೆ ನಭದಿಂದ
ಹರಿದು ಹೋಯಿತು ಉದಕ ಕೆರೆತೊರೆಗಳಿಂದ,
ಮುರಿದು ಹೋದವು ತೆವರಿಗಳು ರಭಸದಿಂದ
ನರಳುತ್ತಿದ್ದರು ಮಂದಿ ಈ ರೀತಿಯಿಂದ.

---

## ಬೆಳಕು ಗೂಡು

ಗಗನವನು ಚುಂಬಿಸುವ ಗೋಪುರದ ತುದಿಯಲ್ಲಿ
"ಜಗಜಗನೆ" ಬೆಳಕೊಂದು ಶೋಭಿಸುವುದು
ದಿಗಿಲುಗೊಳಿಪುದು ಮಿಂಚುವಾ ಮಿಂಚಿನಂತಲ್ಲಿ
ಜಗವನೆಲ್ಲವನೊಮ್ಮೆ ಬೆಳಗುತ್ತಲಿಹುದು

ಏರುತೇರುತ ಶಿಖರ ಕಿರಿದು ಕಿರಿದಾಗುವುದು;
ಏರುವರೆ ತುದಿಗೊಳಗಿನಿಂ ಇರುವುದೇಣಿ.
ಸಾರೆ ದಿನಪನು ಸಂಜೆಯಲಿ ಬೆಳಕ ಹಚ್ಚುವರು
ಹಾರ್ವುದಾಗಲಿ ಬೆಳಕು ಭೂತಗನ್ನಡಿಯಿಂ

ಸಿಡಿಲು ಬಡಿಯದ ತೆರದಿ, ಸರಿಗೆಯನು ತುದಿಯಿಂದ
ಪೊಡವಿಗಿಳಿಸಿರುವರೈ ನೋಡಲಾನಂದ
ನಡುನಡುವೆ ಇಹ ಟೊಳ್ಳಿನಂತಸ್ತುಗಳಲಿ
ಇಡುವರೈ ಸಂಗ್ರಹಿಸಿ ಬೇಕೆನಿಪ ವಸ್ತು

ದಾರಿಗಾಣದೆ ಕಂಗೆಡುವರಿಗೆ ಸುಪಥವನ್ನು
ತೋರಿಪುದೆ ಘನತರದ ಸುಕೃತವಹುದು.
ಧಾರಿಣಿಯಲೀ ದೀಪಗೃಹವು ಪಥವನ್ನು ತಾ
ಬಾರಿಬಾರಿಗು' ತೋರಿಪುದು ಬೆಳಕನಿತ್ತು.

ತನ್ನಯಾ ಸ್ವಾರ್ಥವನು ತ್ಯಜಿಸಿ ದೀಪಾಲಯವು
ಅನ್ಯರಿಗೆ ಉಪಕಾರವೆಸಗುವದು ಘನವು.
ಬನ್ನಗಳು ಒದಗಿ ಬರೆ ಎದೆಗೆಡದೆ ನಿಂತಿರುತ,
ಉನ್ನತದ ಸತ್ಪುರುಷನಂತೆ ದೃಢವಿಹುದು.

ಬಿರುಗಾಳಿ ಮಳೆ ಬಿಸಿಲುಗಳಿಗೆ ಮೈಯನ್ನೊಡ್ಡಿ,
ಇರುಳು ದಿವದಲಿ ಗಂಟೆಗಳನು ತಾ ಹೊತ್ತು
ಪರಹಿತದ ಏಕಾತ್ಮ ಚಿಂತನೆಗೆ ಮನವೊಡ್ಡಿ,
ಮೆರೆಯುತಿಳೆಯಲ್ಲಿರುವುದೀ ದೀಪಗೃಹವು

ಎತ್ತ ಜನುಮವನು ಈ ಭವದೊಳಗೆ ಮಾಡುವುದು
ಉತ್ತಮದ ಪರಹಿತದ ಕಾರ್ಯಗಳ ಮನುಜ!
ಒತ್ತಿ ಬಹ ಎಡರುಗಳಿಗಂಜದೇ ಸ್ವಾರ್ಥವನು
ಕಿತ್ತು ಬಿಡುವುದೆ ನಮಗೆ ಪುಣ್ಯಕ್ಕೆ ಹಾದಿ.

## ಗುರುಗಳಿಗೆ

ಪರಿಶುದ್ಧಾತ್ಮರೆ ನಿಮ್ಮ ಚರಣದ ಸೇವೆ ಮಾಡುವ ಧನ್ಯನು
ಪರಮ ಗುರುಗಳ ಪ್ರೇಮ ಜಲಧಿಯೊಳು ಮೀವ ತನುವಿದು ಮಾನ್ಯವು
ಮೆರೆಯೆ, ಗುಣಗಣನಿಧಿಯುಡೊ ಏನೋ ಮಹಿಮನೆಂದಡೆ ತಿಳಿಯೆನು.
ಸುರರ ಧೇನುವಿನಂತೆ ಕೋರಿದ ಫಲವ ಕೊಡುವಿರೆ ಅರಿಯೆನು

ತಮ್ಮ ಸೇವೆಯೆ ಪಾವನ;
ತಮ್ಮ ನೆನೆವುದೆ ಜೀವನ.

ತಮ್ಮ ಬಳಿಯೊಳು ಬದುಕೆ ಅಳಿಯಲು. ಆತ್ಮ ಸೇರದೆ ದೇವನ-
ತಮ್ಮ ಜ್ಞಾನದ ಬೆಳಕಿನಿಂದಲಿ, ಸಮ್ಯಜ್ಞಾನವ ನೀಗುತ;
ಧರ್ಮಮೂರುತಿಯಂತೆ ಮೆರೆವಿರಿ ಶಿಷ್ಯರೆಮ್ಮನು ಪೊರೆಸುತ

ತಮ್ಮ ಸ್ಮರಣೆಯು ತೊರೆಯೆನು;
ತಮ್ಮ ಮಹಿಮೆಯ ಮರೆಯೆನು.

ತಮ್ಮ ಕೀರ್ತಿಯ ಕೇಳ್ವ ಭಾಗ್ಯವನೀಶನೀಯಲಿ ಬೇಡುವೆ.
ತಮ್ಮ ಕೀರ್ತಿಯ ಜ್ಯೋತಿ ನಾಡನು ಸತತ ಬೆಳಗಲಿ ಬಾಳಲಿ,
ತಮ್ಮ ಸೇವೆಯೊಳೆನ್ನ ದೇಹವು ಎನ್ನ ಚಿತ್ತವು ಸವೆಯಲಿ

ತಮ್ಮ ಚರಣದ ಕಮಲವು
ಎನ್ನ ಶಿರಸಿನ ಭ್ರಮರವು

ಒಂದುಗೂಡುತ ಇರಲಿ ಬೆಳಗುತ ನನ್ನ ಧರ್ಮದ ಗುರುಗಳೆ!

—o-o-o—

## ಕರ್ತವ್ಯ

ಅನುದಿನ ಮಾರುತ ಜಗದಲಿ ಬೀಸುತ
ಜನರಿಗೆ ತೋರುತ, ಪ್ರಾಣವನೀಯುತ
ಮುನಿಯದೆ ಇರುವನು ದಣಿಯದೆ ಬರುವನು
ನೆನೆಯಿರಿ ಮುನಿದರೆ, ನಮ್ಮನು ತೊರೆದರೆ!

ತನ್ನಯ ಪಥದಲಿ ತಿರುಗುತ ಚಂದ್ರನು
ಉನ್ನತ ಕಾರ್ಯವನೆಸಗುತಲಿಂದ್ರನು
ಸನ್ನುತ ಭಾಸ್ಕರ ಬೆಳಗುತ ಜಗವನು
ಮನ್ನಣೆ ಪಡುವರು; ಸುಖವನು ಕೊಡುವರು.



(ಉಡುಪಿ ಶ್ರೀ ಅನಂತೇಶ್ವರ ಶಾಲಾ ವಿದ್ಯಾರ್ಥಿನಿಯರು
ಈ ಹಾಡನ್ನು ಹಾಡುತ್ತಾ ನರ್ತನ ಮಾಡುವುದು)

ತಿರೆಯಲಿ ಅವರನು ನಿಂದಿಸೆ, ವಂದಿಸೆ,
ಪರಿಪರಿ ತೆರದಲಿ ಕಂದಿಸೆ, ಕುಂದಿಸೆ,
ಮರೆಯರು ಕೃತ್ಯವ ತೊರೆಯರು ನಿತ್ಯವ
ಚರಿಸರು ಕೋಪವ ಧರಿಸರು ತಾಪವ.

ಒಂದೇ ತೆರದಲಿ ಬಂದೇ ಭರದಲಿ
ಹಿಂದೆಯು ಕಾಂತಿಯು ಮುಂದೆಯು ಶಾಂತಿಯು
ನೆಂದಿಗು ಬೀರ್ವರು, ಚಂದದಿ ತೋರ್ವರು;
ಇಂದಿಗು' ಹಿಂದಿಗು' ಎಂದಿಗು' ಇರುವರು.

ತೀಡಿದ ಮಾನವ ಕಳೆಯುತ ಜ್ಞಾನವ
ಇಳೆಯಲಿ ಕಾರ್ಯವ ಮಾಡದೆ ಪ್ರಾಯವ
ಕಳೆದರೆ ಸಾಧಕವಿರುವುದೆ? ಬಾಧಕ! -
ತಳೆ ನೀ ಕೆಲಸವ, ಕಳೆ ನೀ ಅಲಸವ.
ಮನುಜನೆ! ನಿನ್ನನು ಹೊಗಳಲಿ, ತೆಗಳಲಿ,
ಮನಸಿಲಿ, ಕನಸಿಲಿ, ನೆನೆಯಲಿ, ಮರೆಯಲಿ,
ಘನತರ ಶಾಂತಿಯಲಿಡುತಲಿ ಪ್ರೀತಿಯ
ಅನುದಿನ ಕಾರ್ಯವ ಮಾಡುತ ಬಾಳೈ!

---

## ಕೋಟಿ—ಚೆನ್ನಯ

ಬೆಳಗುತಿದ್ದುದು ಹೊಳಲು ಪಡುಮಲೆ, ತುಳುವ ನಾಡೊಳು ಹಿಂದಕೆ
ಹೊಲವು ಪೈರಿನ ಕೊಳವು ನೀರಿನ ಬಳಸಿ ಇದ್ದುವು ಅಂದಕೆ.
ಅರಸನೊಬ್ಬನು ಆಳುತಿದ್ದನು ಹೆಸರು ಅವನದು ಪೆರುಮಲ.
ನಿರುತ ಪ್ರಜೆಗಳ ಸಲಹುತಿದ್ದನು; ಮನಸು ಅವನದು ನಿರುಮಲ
ಒಮ್ಮೆ ಬೇಟೆಗೆ ಪೋಗೆ ತಾಗಿತು ಮೊನೆಯು ಮುಳ್ಳದು ಕಾಲಿಗೆ.
ದಮ್ಮು ಕಟ್ಟಿತು ನೋವು ಏರಿತು, ಆಡಲಾರದು ನಾಲಿಗೆ.
ಹತ್ತಿ ಮರವನು ಕಡಿದು ಗಳವನು ಸುತ್ತಿ ಕಟ್ಟಿದ ಚಟ್ಟಕೆ
ಎತ್ತಿ ದೊರೆಯನು ಕೊಟ್ಟು ಹೆಗಲನು ಹೊತ್ತು ತಂದರು ನೆಟ್ಟಗೆ.
ಬಂದು ಕಂಡರು ತಂತ್ರಕಾರರು ಮಂತ್ರ ಮಣಮಣ ಗೈದರು.
ಬಂದುದಿಲ್ಲವು ಫಲವು ಅದರಲಿ. ಕಂಪು ಮೊಗವನು ಒಯ್ದರು.
ಮದ್ದು ನಡೆಯದು, ಬಲಿಯು ತಾಗದು: ನಿದ್ದೆ ಬೀಳದು ಕಣ್ಣಲಿ
ಬಿದ್ದು ಹೊರಳಿದ ಅಳಲಿ ಬೇಡಿದ, ಇದ್ದ ಬೇಡಿದ ಜನರಲಿ.
ಕರೆದು ತಂದರು ಪೇಯಿಬೈದ್ಯೆಯ ತುಂಬು ಬಸುರಿನ ವಿಧವೆಯ
ಸರಿದು ಅರಸನ ಬಳಿಗೆ ನೋವಿಯ ನೋಡುಗಾಯವ ಕಂಡಳು.

ಗಾಯ ಮುಚ್ಚಿತು ನೋವು ಆರಿತು ಬಾಯ ರುಚಿಯದು ತೋರಿತು
ದೇಯಿಯೌಷಧದಿಂದ ರಾಜನ ಕಾಯ ಕಾಂತಿಯು ಬೀರಿತು.

ಜೋಡು ಮಕ್ಕಳ ದೇಯಿ ಹೆತ್ತಳು ಬೀಡಿನರಿಯೊಳು ರಾಜನ
'ಕೋಟಿಚೆನ್ನಯ'ರೆಂದು ಮಕ್ಕಳ ಕರೆದರಲ್ಲಿಯ ಮಾ'ಜನ.
ಅರಸನಿತ್ತನು ಭಾರಿ ಉಚಿತವ ಕರುಣೆಯಿಂದಲಿ ದೇಯಿಗೆ
ತೆರುವೆನೆಂದನು ಪಾರಿತೋಷವ ಬೆಳೆಯೆ ಮಕ್ಕಳು ಮುಂದಕೆ.

ಕಾಲವಾದಳು ಕಳೆಯೆ ಕೆಲದಿನ ದೇಯಿ ತೊರೆಯುತೆ ಮಕ್ಕಳ
ಹಾಲ ಹಸುಗಳನಿತ್ತು ಅರಸನು ಬಾಲರನು ತಾ ಸಲಹಿದ.
ಮಲ್ಲನೆಂಬುವ ಮಂತ್ರಿಯಿದ್ದನು ಕಲ್ಲು ಮನಸಿನ ಖೂಳನು
ಸೊಲ್ಲು ಕಠಿಣವನಾಡೆ ಚೆನ್ನಯ ಕೊಂದೆಬಿಟ್ಟನು ಅವನನು.
ಅರಸ ಕೇಳುತ ಕೊಲೆಯ ವಾರ್ತೆಯ ಕರೆಸಿ ಕೇಳಿದ ಕೋಟಿಯ
"ಏನು ಗೈದಿರಿ? ಕೋಟಿ ಚೆನ್ನಯರೇನು ಸಂಗತಿ ಲೂಟಿಯು"
ಸಲಹುತಿದ್ದೆನು ತಬ್ಬಲಿಗಳೆಂದಾನು ನಿಮ್ಮನು ಪ್ರೀತಿ'ಲಿ
ಕೊಲೆಯ ಗೈದುದರಿಂದ ತಪ್ಪದು ಮರಣ ಓಲಗದೆದುರಲಿ"
"ದೊರೆಯೆ ಬಲ್ಲೆವು ಮರಣ ತಪ್ಪದು, ಕೊಲೆಯ ಪಾತಕಿಗೆಂಬುದು
ಕರುಣೆಯಿಂದಲಿ ಸಲಿಸು ತಾಯಿಗೆ ಅರಿತು ಕೊಟ್ಟಿಹ ವಚನವ"
ಎಂದು ಹೇಳುತ ಕೋಟಿ ಚೆನ್ನಯರಂದು ಗಡುವನು ಇಟ್ಟರು
ಮಂದಿ ಬೆರಗುವ ತೆರದಿ ಬೀಡನು ಚಂಡಕಲಿಗಳು ಬಿಟ್ಟರು,
ಕೋಟಿಚೆನ್ನಯರಂದು ಪಡುಮಲೆ ದಾಟಿ ಪಂಜಕೆ ಬಂದರು.
ಕೋಟಿ ತೋಟಗಳಲ್ಲಿ ಹುಡುಕುತ ಭಾವ ಪೈಯನ ಕಂಡರು.
ಪಂಜ ಸೀಮೆಯ ದೊರೆಯು ಕೇಮರ ಅಂಜುಬುರುಕ ಸ್ವಭಾವದ
ಚೆಂದುಗಿಡಿ ಎಂದೆಂಬ ಮಂತ್ರಿಯು ಅಂದು ಮೆರೆದನು ಕಪಟದಿ.

ಸಾಟಿ ಇಲ್ಲದ ಕೋಟಿಚೆನ್ನಯರಾಟ ನೋಟವನೊಲ್ಲದ
ಸೊಟ್ಟ ಮೋರೆಯ ಚೆಂದುಗಿಡಿ ತಾನಿಟ್ಟ ಬೈದ್ಯರ ಸೆರೆಯಲಿ.
ಧರಿಸಿ ಧೈರ್ಯವ ಸ್ಮರಿಸಿ ದೇವರ ಸೆರೆಯ ಕಂಡಿಲಿ ಸರಿದರು
ಭರದಿ ನಡೆಯುತ ಏಣಮೂರಿನ ದೇವ ಅರಸನ ಕಂಡರು.

ಬೇಟೆಯಾಡಲು ಒಮ್ಮೆ ಪೋದರು ಕೋಟಿಚೆನ್ನಯರಡವಿಗೆ.
ಕೋಟಿ ಕೊಂದನು ಹಂದಿಯನು, ಜಗಳಾಯ್ತು ಪಂಜದ ಜನರಿಗೆ
ಚೆಂದುಗಿಡಿ ಪೆರುಮಾಳನೊಂದಿಗೆ ಬಂದ ರಣಕೆಣ್ಣ್ರರಿಗೆ;
ಅಂದು ವೀಳ್ಯವ ಪಡೆದು ಬೈದ್ಯರು ಸಂಧಿಸಿದ ಜನರೊಂದಿಗೆ
ಯುದ್ಧ ಮಾಡಲು ಚೆಂದು ಬಿದ್ದನು ಸದ್ದು ಇಲ್ಲದೆ ಪಂಜದ
ಬುದ್ಧಿ ಕಾಲಿಗೆ ಹೇಳಿ ಓಡಿದರಿದ್ದ ಜನಗಳು ನಿಲ್ಲದೆ.
ಜಯದ ವಾರ್ತೆಯ ಕೇಳಿ ದೇಪನು ಹಯಗಳೊಂದಿಗೆ ಯುದ್ಧದ
ಬಯಲ ಸೇರಿದ: ಸೇರಿ ನೋಡಿದ ಗಾಯಗೊಂಡಿಹ ಕೋಟಿಯ.

ಗಲ್ಲದಲಿ ಕರವಿಟ್ಟು ಚೀರಿಡುತಲ್ಲಿ ಕುಳಿತಿಹ ಪೆರುಮಲ
ತಲ್ಲಣವಗೊಳ್ಳುತ್ತ ಸಾರಿದ ಮೆಲ್ಲ ಅವರೆಡೆ ದೇಪನು.
ಬಳಲಿ ಬಿದ್ದಿಹ ಕೋಟಿ ಕರೆದನು ಬಳಿಗೆ ಪಡುಮಲೆ ದೊರೆಯನು
"ತಳೆದು ಮೈತ್ರಿಯ ಬೆಳೆಸು ಸ್ನೇಹವ ದೇಪನೊಂದಿಗೆ" ಎಂದನು.

ಕಾಯ ಕಳಚಿದನೆಂದು ನುಡಿಯುತೆ, ಪಾಯಗಾಣದ ಚೆನ್ನಯ
ಸಾಯೆ ಬಡಿದನು ತನ್ನ ತಲೆಯನು ಬಾಯ ಕಲ್ಲಿಗೆ ಬಾವಿಯ—
ಪೇಳಲೇನದ ಪೇಳೆ ತಪ್ಪಿಸಿ ಮೇಲೆ ಸುರಿಧುದು ವರ್ಷವು
ಬಾಲ ಕಲಿಗಳ ಮರಣದಿಂದಲಿ ಕಾಲಮೇಘಗಳತ್ತವು.

ಸತ್ತ ದೇಹಕೆ ಉತ್ತರದ ಕ್ರಿಯೆ ಮತ್ತೆ ಗೈದನು ದೇಪನು
ಚಿತ್ತಪಥದಲಿ ಸುಳಿಯಲೋಸುಗ ಮತ್ತೆ ಗರಡಿಯ ತೆರೆದನು.
ತಿಳಿಯೆ ಮನುಜನೆ! ದೇಹವಳಿದರು ಉಳಿವುದದು ಸತ್ಕೀರ್ತಿಯು
ಗಳಿಸಿ ಪುಣ್ಯವ ಉಳಿಸಿ ಕೀರ್ತಿಯ ಸಲಿಸು ನಶ್ವರ ದೇಹವ.

—ಟಿ. ಪುತ್ತಪ್ಪ.



# ಅವ್ವನ ಅಳಲು



**ಅವ್ವ:** ಪೊರೆ ಪರಮಾತ್ಮನೆ! ಪರದೇಶಿಯನು;
ಪರರೀಯುವ ವೇದನೆ ಸೈರಿಸೆನು.
ಅಶೋಕವನ ಸೀತೆಯೆ ನಾನಿರುವೆ;
ದುಶ್ಯಾಸನನೆಳೆದಗ್ನಿಜೆಯಿರುವೆ
ಮೊರೆಯಿಟ್ಟಾ ಮಾನಿನಿಯರ ಪೊರೆದೆ
ಮೊರೆಯಿಡುವೆನ್ನನು ಪಾಲಿಸು ದಯದೆ.

**ಮಗ:** ಮಾತೆಯೆ! ಈ ತೆರ ಕಾತರವೇಕೆ?
ಈ ತೆರ ಯಾತನೆಗೊಳುತಿಹುದೇಕೆ?

ಉಡುವರೆ ದುಗುಲವು ನಿನಗಿರಬೇಕೆ?
ತೊಡುವರೆ ನಿನಗಾಭರಣವು ಬೇಕೆ?
ವಾಸಿಸೆ ಸುಂದರ ಮಂದಿರ ಬೇಕೆ?
ಪೋಷಿಸೆ ದೇಹವ ಧಾನ್ಯವು ಬೇಕೆ?

**ಅವ್ವ:** ಕಂದನೆ! ನನಗೀಗಾವುದು ಬೇಡ;
ಬಂದಿಹ ಕಷ್ಟದಿ ಜನುಮವೆ ಬೇಡ.

**ಮಗ:** ಬಂದಿಹ ಕಷ್ಟವದೇನೌ ನಿನಗೆ?
ಕುಂದುವ ಕಾರಣವೇನೌ ಮನದೆ?

**ಅವ್ವ:** ಕಂದನೆ! ಕಾಣದೆ ಕೈಕಾಲ ಮೇಲೆ
ಬಂಧಿಸಿ ಇರುತಿಹ ಈ ಸಂಕೋಲೆ?
ಸರಿಯಲಾರೆನತ್ತಿತ್ತಲು ನಾನು
ಕೊರಗುವೆನಳುತಲಿ ನೋಡುವೆಯೇನು?

**ಮಗ:** ಅಯ್ಯೋ! ಮಾತೆಯೆ! ಬಂಧನವಾಯ್ತೆ!
ಅಯ್ಯೋ! ಈ ಪರಿ ಕೊರಗುವದಾಯ್ತೆ!
ಆರೊಳು ಪೇಳಲಿ ಕಷ್ಟವನಿದನು!
ಆರೌ ನಿನ್ನನು ಬಂಧಿಸಿದವನು?

**ಅವ್ವ:** ಆರೆಂದರಿಯೆನು ಪವಡಿಸಿ ಆಗ
ಜೋರಿಂದೇಳಲು ಹಾಕಿದೆ ಬೇಗ;
ಅನ್ನಿಗರೆನ್ನುತ ಜಗೆಯುವೆನೊಮ್ಮೆ;
ನನ್ನವರೆನ್ನುತ ಮರುಗುವೆನೊಮ್ಮೆ.

**ಮಗ:** ಅಮ್ಮನೆ! ಈಗಲೆ ಧೈರ್ಯವ ತಾಳು;
ಸುಮ್ಮನೆ ಬಿಡುವೆನೆ ನಿನ್ನನು ಪೇಳು
ನೀನೇ ಹೊತ್ತಿಹ ಹೆತ್ತಿಹ ತಾಯಿ!
ನೀನೇ ಪ್ರೇಮದಿ ಸಲಹಿದ ತಾಯಿ!

ಜನರಿಗೆ ಜ್ಞಾನವ ನೀಡಿದ ತಾಯಿ!
ಮನುಜರ್ಗೆ ವೇದವನಿತ್ತಿಹ ತಾಯಿ!
ಲೋಕಕೆ ವೀರರ ಕಳುಹಿದ ತಾಯಿ!
ಶೋಕಿಪುದೇತಕೆ, ಋಷಿಗಳ ತಾಯಿ!

**ಅವ್ವ:** ಕಂದನೆ! ನಾನಿದೊ ಬಂಧನವಾಸಿ;
ಇಂದಾನೆನ್ನಯ ಮನಯೊಳೆ ದಾಸಿ.
ಹಿಂದಿನ ವೈಭವ ಸಂಪದವೆಲ್ಲ
ಎಂದಿಗೆ ದೊರೆವುದೊ! ದೇವನೆ ಬಲ್ಲ.
ಮಕ್ಕಳು ಅನ್ಯರ ದಾಸರು ಎಲ್ಲ,
ದಿಕ್ಕಿರದೆನ್ನನು ಮರೆತಿಹರಲ್ಲ!

**ಮಗ:** ಆತುರವನು ಬಿಡು, ಪ್ರೀತಿಯ ಮಾತೆ!
ಕಾತರವನು ಬಿಡು, ಲೋಕಖ್ಯಾತೆ!
ಕಟ್ಟಿದ ಸಂಕಲೆಯಿದ ನಾ ಜಡಿದು
ತಟ್ಟನೆ ಬಿಡಿಸುವೆ ಬಂಧವ ಕಡಿದು.

**ಅವ್ವ:** ದುಡುಕಲು ಬಾರದು ತಡೆಯಲೆ ಪುತ್ರ!
ನಡೆಸಲು ಬಲವನು ಹರಿವುದು ರಕುತ
ಬಲವಿನಿತಿಲ್ಲವು ಸೈರಿಸಲಾರೆ;
ಕೆಲವರು ಬಲು ದುಡುಕುತೆ ಕೈಯ್ಯಾರೆ
ವೇದನೆಯಿತ್ತರು, ವಿಫಲವು ನೋಡು!
ಕಾಲಲಿ ಹುಣ್ಣಾಗಿರುವುದ ನೋಡು!

**ಮಗ:** ಆರೌ ನಿನ್ನನು ಬಂಧಿಸಿದವನು?
ಆರಲಿ ಇರುವುದು ಕೀಲಿಯ ಕೈಯು?
ಈಗಲೆ ತರುವೆನು ಈಕ್ಷಣ ಸಾಗಿ,
ಬೇಗನೇ ಪೇಳೌ ಬಿತ್ತರವಾಗಿ.

**ಅವ್ವ:** ಹೇಳಲು ನಿನಗಿದನಂಜುವೆ ಬಾಲ!
ಹೇಳುವುದೇತಕೆ? ಫಲವೇಂ ಬಾಲ!
ಹಿಂದಕೆ ಕೇಳುತ ಹೋದವರೆಲ್ಲ
ಇಂದಿಗು ತೋರರು, ಕೊರಗುವೆನಲ್ಲ!

**ಮಗ:** ಅಂಜಿಕೆ ಏತಕೆ? ಅಂಜದಿರಿಂತು;
ಅಂಜಿಕೆಯಾಂತರೆ ಕೆಲಸವದೆಂತು?
ನಿನಗಾಗಿ ಗುಂಡಿನ ಬಾಯಿಗು' ಬೀಳ್ವೆ,
ನಿನಗಾಗಿ ಕತ್ತಿಯ ಬಾಯಿಗು' ನಿಲುವೆ.
ನಿನಗಾಗಿ ಸೆರೆಮನೆಗಾದರು' ಹೆದರೆ
ನಿನಗಾಗಿ ಪ್ರಾಣವನೀಯಲು ಬೆದರೆ.

**ಅವ್ವ:** ಗುಟ್ಟನೊಳೊರೆಯುವೆ ಕೇಳ್ವೆ ಕುವರ!
ತಟ್ಟನೆ ಜಯಿಸುತ ಬಾ ನೀನವರ!

**ಮಗ:** ದುಷ್ಟರ ಕೈಯಿಂ ಕೀಲಿಯ ತಂದು,
ಕಷ್ಟದ ಬಂಧನ ಬಿಡಿಸುವೆನಿಂದು
ನಿನ್ನಯ ಕೃಪೆಯಿಂ ಜಯಿಸುತ ಬರುವೆ,
ನಿನಗಾಗಿ ಜೀವವ ತೆತ್ತರು' ತೆರುವೆ.

(,,ಬಲಿದಾನ"ವನ್ನು ಆಧರಿಸಿ ಬರೆದುದು)

---

## ಬಾಡಿ ಬಿದ್ದ ಹೂ

ಹಿಂದೆ ಗಿಡದ ತುದಿಯನೇರಿ
ಗಂಧವನ್ನು ಧರೆಗೆ ಬೀರಿ
ಉಗುವ ನಗೆಯ ಚೆಲುವ ತೋರಿ
ಮಿಗುವ ತೋಷ ಪಡೆದೆನು.

ಎನ್ನೊಳಾಗ ಪ್ರೇಮವಿರಿಸಿ
ಎನ್ನ ನೆಲೆಯ ಠಾವನರಸಿ
ತುಂಬಿ ಹರಿವ ಮಧುವ ಹೀರಿ
ತುಂಬಿ ತೋಷಗೊಂಡಿತು.

ಇಂದುವದನೆ ಬಂದು ನೋಡಿ
ಗಂಧವನ್ನು ಮೂಸಿ ನೋಡಿ
ನಂದದಿಂದ ಕೂಡಿ ಪಾಡಿ
ಅಂದಿನಂದಕೊಲಿದಳು.

-ooo-

ಬಾಡಿ ನೆಲಕೆ ಬಿದ್ದೆನೀಗ
ನೋಡಲೆನ್ನ ಬಾರರೀಗ
ಗಂಧವಿಲ್ಲ ಚಂದವಿಲ್ಲ-
ವೆಂದು ಅಗಲಿ ಪೋದರು.

ಇಂದು ನಾನು ಮರುಗುವಾಗ
ನೊಂದು ನೊಂದು ಸೊರಗುವಾಗ
ಬಂದು ನಿಂದು ನೋಳ್ಪರಿಲ್ಲ
ಬಂದ ದುಗುಡ ಕೇಳ್ವರಿ!

ಅರಿತೆನೀಗ ಗಂಧವೊಂದೆ
ಧರೆಯ ಮಾನ ಪಡೆವುದೆಂದೆ
ಗಂಧವಿಲ್ಲದಿರಲು ಮುಂದೆ
ಕುಂದಿ ಬಾಳು ವ್ಯರ್ಥವು.

---

## ಸಂಯುಕ್ತೆ

ಮದುವೆಯ ಮಂಟಪ ಸಿಂಗರಿಸಿತ್ತು,
ವಿಧವಿಧ ಶಿಲ್ಪವು ಕಂಗೊಳಿಸಿತ್ತು,
ನಾಡಿನ ಶಿಲ್ಪಿಗಳಾ ಕಲೆಯೆಲ್ಲ
ಕೂಡುತೆ ಆ ಎಡೆ ಸಂದಣಿಸಿತ್ತು.
ಅರಸನ ಮಗಳ ಸ್ವಯಂವರವು! ಅದಕೇ ಇನಿತಾಡಂಬರವು!
ಕಾನೂಜಿನ ರಾಜಾ ಜಯಚಂದ—
ಏನೆನಲಾತನ ಸಂಪದದಂದ!
ಕೈಲಾಸದ ಶಿಖರವನೂ ದಾಟಿ
ಹಾರಿತ್ತಾತನ ಕೀರ್ತಿಪುಳಿಂದ!
ಆತನ ಕುವರಿಯೆ ಸಂಯುಕ್ತೆ; ಬುದ್ಧಿ ರೂಪಗುಣಸಂಯುಕ್ತೆ
ಆಕೆಯ ರೂಪದ ಕತೆಯನು ಕೇಳಿ,
ಮೂಕಾಶ್ಚರ್ಯದ ರಾಜರು ತಾಳಿ,
ಕೈವಿಡಿಯುವ ಸೌಭಾಗ್ಯವ ಕೋರಿ,
ಸಾವಿರ ದೈವಕೆ ಹರಕೆಯ ಹೇಳಿ—
ಮನದಲಿ ಕಳಕಳಿಗೊಂಡಿಹರು—ಕನಸಿಲಿ ಅವಳನೆ ಕಂಡಿಹರು!
ಆಕೆಯ ಲಾವಣ್ಯವ ಕಂಡವರು
ನಾಕದ ಹೆಣ್ಗಳ ಕತೆ ಮರೆಯುವರು,
ಆಕೆಯ ನುಡಿಗಳ ವನಿಗೇಳ್ದವರು
ಕೋಕಿಲ ಗಾನದೆ ವ್ಯಥೆ ಪಡೆಯುವರು.
ಆಕೆಯ ಮೊಗ ದಿಟ್ಟಿಸಿದವರು—ಹುಣ್ಣಿಮೆ ಚಂದ್ರನ ತೆಗಳುವರು!
ಬಣ್ಣಿಸಿ ಬಣ್ಣಿಸಿ ಆಕೆಯ ಸೊಬಗ
ನುಡಿಗಳ ಮುಗಿಸಿತು ಕವಿಗಳ ಬಳಗ;
ಹಾಡುತೆ ಹಾಡುತೆ ಆಕೆಯ ಚೆಲುವ
ರಾಗಗಳೆಲ್ಲವು ಮುಗಿದವು ಜಗದ!
ನಿತ್ಯ ನವೀನವು ಆ ರೂಪ! ಅವಳ ವರಿಸಲಾರನುರೂಪ?

ಪೌರಾಣಿಕ ಯಶವೆತ್ತಾ ದಿಲ್ಲಿ–
ಆರಾ ಹೆಸರನು ಅರಿಯದರಿಲ್ಲಿ?
ಸಾವಿರ ವಂಶಗಳಾಳಿದ ನಗರ–
ಸಾವಿರ ವಂಶದ ನೆತ್ತರ ಕೊಲ್ಲಿ!
ಪೃಥ್ವೀರಾಜನು ಅದರೊಡೆಯ– ವೀರರ ವೀರನು ಮೃದುಹೃದಯ.

ಜಯಚಂದಗು ಅವನಿಗು ಹಳೆಹಗೆಯು;
ನೆತ್ತರ ತೃಷೆಯನು ಎಬ್ಬಿಪ ಬಗೆಯು!
ಆದರೆ, ದುರ್ಭಾಗ್ಯವೆ! ಸಂಯುಕ್ತೆ!
ಪೃಥ್ವಿಯಲೇ ನೆಟ್ಟದೆ ಅವಳೆದೆಯು!
ತಂದೆಯ ಹಗೆಯನು ವರಿಸುವುದೆ? ಒಲ್ಲದವನನೊಡವೆರಸುವುದೇ?

ಸ್ವಯಂವರದ ದಿನ ಬಂತೇ ಬಂತು!
ವರಿಸಲು ಹಾತೊರೆದರಸರು ಬಂದು
ಮಂಟಪದಲಿ ಕಿಕ್ಕಿರಿದರು ಕುಳಿತು–
ಆಕೆಯ ದುಗುಡವ ಬಣ್ಣಿಸಲೆಂತು?
ಮೊಳಗುತಲಿವೆ ಶುಭ ವಾದ್ಯಗಳು! ಕಡೆಗೆ ಅವೇ ರಣವಾದ್ಯಗಳು!

ಸ್ವಯಂವರದ ಘಟಿಯೊದಗಿತು ಬಂದು;
ಕೈಯಲಿ ಮಾಲೆಯ ಹಿಡಿಯುತೆ ನಿಂದು
ನಿರುಕಿಸುತಿರುವಳು ನೆರೆದಿಹ ನೃಪರ
ಮದುಮಗಳಾ ಸಂಯೋಗಿತೆ ಬಂದು–
"ಆರಿಗೆ ಹಾಕಲಿ ಮಾಲೆಯನು? ಕಾಣೆನು ಪೃಥ್ವಿಯ ಮೋರೆಯನು!"

ಅರಸರೆಲ್ಲರೆದೆ ಹಾರುತಲಿತ್ತು–
"ವರಿಪಳೆ ನನ್ನನು ಸೊಬಗಿನ ಮುತ್ತು?"
ಆರನು ವರಿಸಳು ಈ ಚೆಲು ನಾರಿ –
ತಗದೀ ಮಾಲೆಗೆ ನಿಮ್ಮಯ ಕತ್ತು!
"ಬಾಗಿಲಲಿದೆ ಪೃಥ್ವಿಯ ಬೊಂಬೆ–ಅದನೆ ವರಿಸಿ ನಾ ಸೊಗಗೊಂಬೆ!"

ಪೃಥ್ವಿಯನವಮಾನಿಸಲೆಂದೆಂದು
ಆತನ ಮೂರ್ತಿಯ ಮಾಡಿಸಿ ತಂದು
ಬಾಗಿಲಲಿರಿಸಿದ್ದನು ಜಯಚಂದ
"ಕದಕಾಯುವ ಬೆಸನವು ನಿನಗೆ"ಂದು!
ಅದಕೇ ಮಾಲೆಯ ಹಾಕಿದಳು! ಅಕಟಾ! ಅಕಟಾ! ಹಾಕಿದಳು!

ಭೂಪರ ನೆರವಿಯೊಳೆದ್ದಿತು ಗುಲ್ಲು!
"ಮೂರ್ತಿಯ ವರಿಸುವುದುಂಟೇ ಎಲ್ಲು?"
ನೋಡುತೆ ನೋಡುತೆ ಗುಂಪಿನ ನಡುವೆ
ಧಾವಿಸಿ ನಡೆದನು ಪೃಥ್ವಿಯು ಅಲ್ಲು!
ಸಂಯುಕ್ತೆಯನದೊ ಎತ್ತಿದನು! ಅಯ್ಯೋ, ಕುದುರೆಯ ಹತ್ತಿದನು!

ಮಿಂಚಿನ ಹೊಂಚಿನ ತೆರದಲಿ ಇನಿತು
ನಡೆದುದು ನೆರೆದವರ ಅಚ್ಚರಿಯೆನಿತು!
ಸಿಡಿಲಿನ ಗರ್ಜನೆಯಂದದ ಖುರದ
ಘಟ್ಟನೆಯೊಂದಿಗೆ ಹಾರಿತು ಚಿಗಿದು-
ಇದು ಕುದುರೆಯೊ ಮೇಣಿದು ಮುಗಿಲೊ! ವೀರರ ಎದೆಗಾಯಿತು ದಿಗಿಲೊ

ನಿಂತಿತು ಶುಭವಾದ್ಯವು, ರಣಭೇರಿ
ಮೊಳಗಿತು, ತಮ್ಮಯ ಕುದುರೆಗಳೇರಿ,
ಪೃಥ್ವೀರಾಜನ ಬೆನ್ನಟ್ಟಿದರು
ರಾಜರು ಕಣ್ಣಲಿ ಕಿಡಿಮಳೆ ಕಾರಿ-
ಮಿಂಚ ಗುಡುಗು ಹಿಂಬಾಲಿಸುವೊಲ್! ಮೊದಲ ಕೊನೆಯು ಬೆನ್ನತ್ತುವವೊಲ್

—ಪಿ. ವೆಂಕಟರಮಣಾಚಾರ್ಯ.

# ದಾನ

ಕಮ್ಮಲರಿನ ಸಿರಿ ಬನದೆಲರೆದೆಯೊಳು
ತಂಪನು ಬೀರುವುದು
ಚಿಮ್ಮುತೆ ಚಿಗಿಯುತೆ ಹರಿಯುವ ಹೊನಲಿದು
ಪೆಂಪನು ಪಸರಿಪುದು

ಮೂಡಣ ಬಾನಿನ ಮುಗಿಲಿನ ಮೂಗುತಿ
ಬೆಳಗಿನ ಭಿಕ್ಷೆಯನು
ಬೇಡುವ ಬೇಡದರಿಗೆ ಕೊಡುತಿರುವುದು;
ಬಾಳನು ಬೆಳಗುವುದು

ಬಣ್ಣದ ಚಿಟ್ಟೆಗಳೊಲಿಯುತೆ ಹಾರ್ವವು,
ಕಣ್ಣಿಗೆ ಹಬ್ಬವದು.
ತಿಣ್ಣನೆ ತೀಡುವ ತಂಬೆಲರೋಳಿಯು
ಹಣ್ಣನು ಮಾಗಿಪುದು

ಹಚ್ಚಗೆ ಹಸುರಿನ ಮೇಲೊರಗಿರುತಿಹ
ಮಂಜಿನ ಮಣಿಗಳಿವು
ನಚ್ಚಿನ ಮೆಚ್ಚಿನ ಗೆಳೆಯರ ತೆರದಲಿ
ರಂಜನೆಗೈಯುವುವು.

ಬುಟ್ಟಿಯ ಪಿಡಿದೈ ತರುವಾ ಪೆಣ್ಣಿನ
ನಲ್ಮೆಯದೆನಿತೆನಿತೊ!
ಸೃಷ್ಟಿಯ ದಾನದ ಕೈಗಳ ಗೈಮೆಯ
ಮೇಲ್ಮೆಯದೆನಿತೆನಿತೊ!

(ಕಾವ್ಯ ಸಾಮ್ರಾಜ್ಯದಿಂದ) —ಸ್ವರ್ಗೀಯ ಪಂ. ರಾಘವಾಚಾರ್.



